# ಭಾಷಾ ಶಿಕ್ಷಣ



ಲೇಖಕರು
ಶ್ರೀ ಮಿರ್ಜಿ ಅಣ್ಣಾರಾಯ
ಕನ್ನಡ ಶಾಲಾ ಶಿಕ್ಷಕರು, ನೇಡಬಾಳ

೧೯೫೭

ಬುಕ್ ಡಿಪೋ, ಧಾರವಾಡ.

# ಭಾಷಾ ಶಿಕ್ಷಣ



ಲೇಖಕರು

**ಮಿರ್ಜಿ ಅಣ್ಣಾರಾಯರು**

ಕನ್ನಡ ಶಾಲಾ ಶಿಕ್ಷಕರು,
ಸೇಡಬಾಳ

೧೯೫೭

ಭಾರತ ಬುಕ್ ಡಿಪೊ, ಧಾರವಾಡ.

# ಪರಿವಿಡಿ

ಭೂಮಿಕೆ —

೧ ವಿಷಯ ವ್ಯಾಪ್ತಿ ೧

೨ ವಿಷಯ ಸ್ವರೂಪ ೩

೩ ಸಾಧನ-ಚತುಷ್ಟಯ ೬

೪ ಮನೋವಿಕಾಸ ಮತ್ತು ಅಭ್ಯಾಸಕ್ರಮ ೧೮

೫ ಶಿಕ್ಷಕನೂ, ಪಠ್ಯ ಪುಸ್ತಕಗಳೂ ೨೯

೬ ಗದ್ಯ ಶಿಕ್ಷಣ ೩೬

೭ ಕವಿತಾ ಶಿಕ್ಷಣ ೪೯

೮ ವ್ಯಾಕರಣ ಕಲಿಸುವ ಕ್ರಮ. ೫೯

೯ ಓದು-ಬರಹಗಳನ್ನು ಕಲಿಸುವುದು ೭೦

೧೦ ಭಾಷಾ ಶಿಕ್ಷಣದ ಸಫಲತೆ ೭೮

ಚಟುವಟಿಕೆಯ ಹಿನ್ನೆಲೆಯ ಪಾಠಗಳು ೮೦

---

# ಭೂಮಿಕೆ

ಈ 'ಭಾಷಾ-ಶಿಕ್ಷಣ' ವನ್ನು ಕನ್ನಡ ನಾಡಿನ ಶಿಕ್ಷಣ ಪ್ರೇಮಿಗಳ ಕೈಯಲ್ಲಿ ಇಡಲು ನನಗೆ ತುಂಬ ಸಂತಸವಾಗುತ್ತದೆ ಸುಮಾರು ಹದಿನೈದು ವರ್ಷಗಳಿಂದ ಕನ್ನಡ ಶಾಲೆಯಲ್ಲಿ ಈ ವಿಷಯವನ್ನು ಕಲಿಸುತ್ತಲಿರುವೆ ಅದಕ್ಕಾಗಿ, ಎರಡು ವರುಷ ಶಾಸ್ತ್ರೀಯ ಪದ್ಧತಿಯಿಂದ ತರಬೇತಿಯನ್ನು ಹೊಂದಿದುದಾಗಿದೆ ಆಗ ಅಭ್ಯಸಿಸಿದ ಶಿಕ್ಷಣ ಶಾಸ್ತ್ರವನ್ನು ಇತ್ತೀಚಿನ ಎಂಟು ವರ್ಷಗಳಲ್ಲಿ ನಿತ್ಯದ ಪಾಠಗಳಲ್ಲಿ ವಿವಿಧ ರೀತಿಯಿಂದ ಪ್ರಯೋಗಿಸಿ ನೋಡುವ ಅವಕಾಶವೂ ಲಭಿಸಿದೆ ಅದನ್ನು ಮುಂದರಿಸಿ, ನೇಡಬಾಳದ ಸನ್ಮತಿ ವಿದ್ಯಾಲಯದಲ್ಲಿ ಮಾಧ್ಯಮಿಕ ಶಾಲೆಯ ಮೇಲಿನ ವರ್ಗಗಳಲ್ಲಿ ಕನ್ನಡವನ್ನು ಬೋಧಿಸಿ ನೋಡಲಾಯಿತು ಇವೆಲ್ಲ ಪ್ರಯೋಗಗಳ ಅನುಭವದ ಸಾರಸಂಗ್ರಹದಂತೆ ಈ ಬರವಣಿಗೆ ಇದೆಯೆಂದು ಹೇಳ ಬಹುದು

ಇಲ್ಲಿಯ ಶೈಕ್ಷಣಿಕ ತತ್ವಗಳ ವಿವೇಚನೆಯನ್ನು ಯಾವ ಬಾಷಾ ಶಿಕ್ಷಣಕ್ಕೂ ಅನ್ವಯಿಸಬಹುದಾಗಿದೆ ಅದರಂತೆ ಸಂಗ್ರಹ ರೂಪವಾಗಿ ಕೊಟ್ಟ ಅಭ್ಯಾಸ ಕ್ರಮವನ್ನು ಕೂಡ ಯಾವ ನವೀನ ಅಭ್ಯಾಸ ಪತ್ರಿಕೆಯು ಬಂದಾಗಲೂ ಉಪಯೋಗಿಸಲಿಕ್ಕೆ ಅಡ್ಡಿಯಾಗುವದಿಲ್ಲ ತತ್ವ, ಸತ್ವ, ಧ್ಯೇಯ ಗಳು ಒಂದೇ ಆಗಿದ್ದು, ಬಾಹ್ಯ ನೋಟಕ್ಕೆ ಕ್ರಮಗಳು ವ್ಯತ್ಯಾಸಗೊಳ್ಳುವದ ರಿಂದ ಶಿಕ್ಷಣದಲ್ಲಿ ಕ್ರಾಂತಿಯಾಯಿತೆಂದು ಶಿಕ್ಷಕರು ಹಿಂಜರಿಯಬೇಕಾ ಗಿಲ್ಲ ಗೊಂದಲದಲ್ಲಿಯೂ ಬೀಳಬೇಕಾಗಿಲ್ಲ ಇದ್ದ ವಿಷಯವನ್ನು ಹೊಸ ದೃಷ್ಟಿಯಿಂದ ಕಂಡು, ತಮ್ಮ ಅಧ್ಯಾಪನ ವೃತ್ತಿಗೆ ಅಳವಡಿಸಿಕೊಳ್ಳಲಿಕ್ಕೆ ಬುದ್ಧಿಪೂರ್ವಕವಾಗಿ ಯತ್ನಿಸಬೇಕು ಅಂದರೆ ಬೋಧನೆಯ ಕರ್ಮವು ಸುಗಮವಾಗುವದು

ಇದರಲ್ಲಿ ಕೊನೆಗೆ ಕೆಲವು ಪಾಠಗಳನ್ನೂ ಕಲಿಸುವ ಟಿಪ್ಪಣಿಗಳನ್ನೂ ಕೊಟ್ಟಿದೆ ಅವು ಸ್ಥೂಲ ರೂಪ-ರೇಖೆಗಳು ಮಾತ್ರ ಆಗಿವೆ ಅವುಗಳನ್ನು ಕೇವಲ ದಿಕ್ ಸೂಚಿಗಳಂತೆ ನಿರೀಕ್ಷಿಸಬಹುದು ಈಗಿನ ಜೀವನ ಶಿಕ್ಷಣಕ್ಕೆ ಉಪಯುಕ್ತವೆನಿಸುವ ಚಟುವಟಿಕೆಯ ಹಿನ್ನೆಲೆಯ ಪಾಠಗಳನ್ನೂ ಇಲ್ಲಿ

ಸೇರಿಸಿವೆ ಅವು ಶಿಕ್ಷಕ ಬಂಧುಗಳಿಗೆ ಹೆಚ್ಚಿಗೆ ಉಪಯುಕ್ತವೆನಿಸಬಹುದು ಶಿಕ್ಷಕನ ಕಲ್ಪಕತೆ, ಕಾರ್ಯ ತತ್ಪರತೆ, ಆಸ್ಥೆಗಳೇ ಶಿಕ್ಷಣ ಕಾರ್ಯದ ಸಾಫಲ್ಯದ ಮೂರು ಸೂತ್ರಗಳಾಗಿವೆ ಇವುಗಳನ್ನು ಹೆಚ್ಚಿಸಿಕೊಂಡು ಮುಂದರಿವ ಆವಶ್ಯಕತೆ ಈಗ ಇದೆ

ಈ ಚಿಕ್ಕ ಪುಸ್ತಕವನ್ನು ಬರೆಯುವಾಗ ಜಮಖಂಡಿ ಟ್ರೇನಿಂಗ ಕಾಲೇಜನಲ್ಲಿ ಅಧ್ಯಾಪಕರಾಗಿರುವ ಶ್ರೀ ಟಿ ಕೆ ಪಾಟೀಲ ಬಿ ಎ ಬಿ ಟಿ ಡಿ ಬಿ ಇ ಇವರೊಡನೆ ಹಲವು ಸಲ ಚರ್ಚಿಸಿರುವೆ ಅವರ ಸಲಹೆ, ಮಾರ್ಗದರ್ಶನಗಳು ಇದರಲ್ಲಿ ತುಂಬ ವ್ಯಕ್ತವಾಗಿವೆ ನನ್ನ ಸಹೋದ್ಯೋಗಿ ಗಳಾದ ಶ್ರೀ ಅನಂತರಾವ ಕೆ ಜೋಸಗೆಯವರು ಆಗಾಗ ಇದರ ಹಸ್ತ ಪ್ರತಿಯನ್ನು ಅವಲೋಕಿಸುತ್ತ ಇದ್ದು, ತಮ್ಮ ಉಪಯುಕ್ತ ಅನುಭವ ಗಳನ್ನು ಇದಕ್ಕೆ ಸೇರಿಸಿದ್ದಾರೆ ಹೀಗಾಗಿ ಈ ಕೃತಿಯು ಒಂದಿಷ್ಟು ಪೂರ್ಣ ತೆಯನ್ನು ಹೊಂದಿದೆ ಎಂದು ಹೇಳಬಹುದಾಗಿದೆ ಇವರಿಗೆಲ್ಲ ನನ್ನ ಕೃತಜ್ಞತೆಯ ವಂದನೆಗಳು ಸಲ್ಲಬೇಕು

ಇನ್ನು ಈ ಕೃತಿಯನ್ನು ಒಲವಿನಿಂದ ಪ್ರಕಟಿಸಲು ಮುಂದೆ ಬಂದ ಧಾರವಾಡದ ಭಾರತ ಬುಕ್ ಡಿಪೊದ ಸಂಚಾಲಕರಿಗೆ ವಂದನೆಗಳನ್ನು ಸಲ್ಲಿಸುವೆ

ವಿಶಾಲ ಕರ್ನಾಟಕದ ಶಿಕ್ಷಕರೆಲ್ಲರೂ ಈ ಕೃತಿಯನ್ನು ಪ್ರೀತಿಯಿಂದ ಸ್ವೀಕರಿಸುವರೆಂದು ಹಾರೈಸುವೆ

**–ಮಿರ್ಜಿ ಅಣ್ಣಾರಾಯ**



# ಭಾಷಾ ಶಿಕ್ಷಣ



## ೧. ವಿಷಯ ವ್ಯಾಪ್ತಿ

ಪ್ರಾಣಿಗಳಲ್ಲಿ ಮಾನವತೆಯ ಮುಖ್ಯ ವೈಶಿಷ್ಟ್ಯವೆಂದರೆ ಭಾಷೆ ಈ ಭಾಷೆಯಿಂದಲೇ ಮಾನವನು ಪರಂಪರಾಗತವಾಗಿ ಬಂದ, ವಿಶ್ವದೊಳಗಿನ ಎಲ್ಲ ಜ್ಞಾನನಿಧಿಗ ಒಡೆಯನಾಗುವನು ಇಷ್ಟೇ ಅಲ್ಲ, ಭೂತ-ವರ್ತಮಾನ-ಭವಿಷತ್ ಕಾಲಗಳಲ್ಲಿ ಮಾನವ ಜೀವನದ ಸುಸಂಬದ್ಧತೆಯನ್ನೂ ವಿಕಾಸವನ್ನೂ ಸಾಧಿಸುವದಕ್ಕೆ ಮಾಧ್ಯಮವಾಗಿ ನಿಲ್ಲಲು ಅರ್ಹವಾದ ಒಂದೇ ಒಂದು ಸಾಧನವೆಂದರೆ ಭಾಷ ಅದರಿಂದ ಸಂಸ್ಕೃತಿಯ ಸಂರಕ್ಷಣೆ ಪೋಷಣೆಯಾಗುವುದು ಭಾಷೆಯಿಂದ ಸಂಸ್ಕೃತಿಯೆಂಬ ಆತ್ಮಕ್ಕೆ ಭಾಷೆ ಶರೀರವಿದ್ದಂತೆ ಶರೀರದಲ್ಲಿಯೇ ಆತ್ಮನ ಪ್ರತೀತಿ – ಎಂಬುದನ್ನು ಇಲ್ಲಿ ಭಾಷೆಗೆ ನಾವು ಅನ್ವಯಿಸಬಹುದು

ಇನ್ನು ವ್ಯಕ್ತಿಯ ಮನಸ್ಸಿನಲ್ಲಿಯ ಭಾವ, ವಿಚಾರ, ವಿಕಾರಗಳೆಲ್ಲ ವ್ಯಕ್ತವಾಗುವುದು ಭಾಷೆಯಿಂದ ಇನ್ನೂ ಸ್ವಲ್ಪ ಮುಂದರಿದು ಹೇಳಬೇಕಾದರೆ ಮೂಲದಲ್ಲಿ ಭಾವ, ವಿಚಾರ ಮತ್ತು ವಿಕಾರಗಳೆಲ್ಲ ಮನಸ್ಸಿನಲ್ಲಿ ಜನಿಸುವುದು ಭಾಷೆಯ ರೂಪದಲ್ಲಿಯೇ ಈ ಕ್ರಿಯೆಯು ಸರಿಯಾಗಿ ನಡೆಯುವುದು ಮಾತೃಭಾಷೆಯಲ್ಲಿ ಮಾತ್ರ ಅಂದರೆ ಭಾವ ಮೊದಲಾದವುಗಳು ಸ್ಪಷ್ಟವಾಗಿ ಮೂಡಿ, ಮೂಡಿದ್ದು ಸರಿಯಾಗಿ ವ್ಯಕ್ತವಾಗುವುದು ತಾಯ್ನುಡಿಯಲ್ಲಿಯೇ ಸಾಧ್ಯ. ಇದರಿಂದ ವ್ಯಕ್ತಿತ್ವವೆಂಬುದಕ್ಕೂ ಮಾತೃಭಾಷೆಗೂ ಎಷ್ಟು ನಿಕಟ ಸಂಬಂಧವಿದೆಯೆಂಬುದು ಗೊತ್ತಾಗುವುದು ಒಂದರ ವಿಕಾಸ ಇನ್ನೊಂದನ್ನವಲಂಬಿಸಿದೆ ವ್ಯಕ್ತಿತ್ವ ವಿಕಾಸ, ಸಹಜ ಪ್ರವೃತ್ತಿಗಳ ಉದಾತ್ತೀಕರಣಗಳೇ ಶಿಕ್ಷಣವೆಂದು ಹೇಳುವಾಗ ಅದರಲ್ಲಿ ಭಾಷಾವಿಷಯದ ಮಹತಿಯೆಷ್ಟು ? ವ್ಯಾಪ್ತಿ ಎಷ್ಟು ? – ಎಂಬುದರ ಕಲ್ಪನೆಯು ಯಾವ ಶಿಕ್ಷಣ ತಜ್ಞನಿಗೂ ಹೊಳೆಯದೆ ಹೋಗುವದಿಲ್ಲ

ಅದೇಕೆ, ಮಾತೃಭಾಷೆಯೊಂದೇ ಸಮಗ್ರ ಶಿಕ್ಷಣದ ಸಂಪೂರ್ಣ ಅಸ್ತಿವಾರ ವಾಗುವ ಯೋಗ್ಯತೆಯುಳ್ಳದೆಂಬುದನ್ನು ಎಲ್ಲರೂ ಸ್ವೀಕರಿಸಬೇಕಾಗು ವುದು

ಮಾತೃಭಾಷೆಯು ಸ್ವಾಭಾವಿಕವಾಗಿ ಮಗುವಿಗೆ ಬರುವುದು ಅದಕ್ಕೆ ವಿಶೇಷ ಅಭ್ಯಾಸದ ಅವಶ್ಯಕತೆ ಇಲ್ಲ — ಎಂಬ ತಿಳುವಳಿಕೆಯೇ ನಮ್ಮ ಶೈಕ್ಷಣಿಕ ಎಲ್ಲ ಅವನತಿಗೆ ಕಾರಣವಾಗಿದೆ ನಿತ್ಯದ ವ್ಯವಹಾರದಲ್ಲಿ ಸುತ್ತಲಿನವರ ಕೂಡ ವ್ಯವಹರಿಸಲಿಕ್ಕೆ ತಕ್ಕಷ್ಟು ಭಾಷಾಜ್ಞಾನವಾದರೆ ತೀರಲಿಲ್ಲ ಜಗತ್ತಿನೊಳಗಿನ ವಿವಿಧ ವಿಚಾರಗಳನ್ನೂ ಭಾವಗಳನ್ನೂ ವ್ಯಕ್ತಪಡಿಸುವ ಗ್ರಂಥಗಳನ್ನು ಓದಿ ತಿಳಿದುಕೊಳ್ಳುವ ಶಕ್ತಿಯು ಮನುಷ್ಯನಿಗೆ ಬರಬೇಕು. ಹೊಸ ಹೊಸ ವಿಚಾರಗಳನ್ನು ತಿಳಿದುಕೊಳ್ಳುವುದರಿಂದ ನಮ್ಮಲ್ಲಿಯ ವಿಚಾರ ಶಕ್ತಿಯು ವಿಕಾಸವಾಗುವುದು. ಇದರಂತೆಯೇ ಭಾವನೆಯೂ ಕೂಡ ಅದರಿಂದ ವ್ಯಕ್ತಿತ್ವದ ಪರಿಪೂರ್ಣತೆಯು ಕಡೆಗೆ ಸಾಗುವದೆಂದರೆ ಭಾಷಾಜ್ಞಾನವನ್ನು ಬೆಳೆಯಿಸಿಕೊಳ್ಳುವದೇಂದೇ ಅರ್ಥ ಚಾರಿತ್ರ್ಯ, ಶೀಲಗಳೆಂಬಿವೆಲ್ಲ ಭಾವನೆಯನ್ನೂ ವಿಚಾರವನ್ನೂ ಅವಲಂಬಿಸಿವೆ ಭಾವ ವಿಚಾರಗಳೆಂದರೆ ಮೂಲದಲ್ಲಿ ಮಾನಸಿಕ ಭಾಷೆಗಳೆಂದೇ ಹೇಳಬಹುದಾಗಿದೆ ಆದ್ದರಿಂದ ಭಾಷಾಜ್ಞಾನದ ಬೆಳವಣಿಗೆಯೇ ಮನುಷ್ಯನ ಶೀಲ ಸಂವರ್ಧನೆಗೂ ಕಾರಣವಾಗುವುದು ಈಗ ಮಾನವನ ಮುಕ್ತಿಯ ಸಾಧನೆಗೂ ಧರ್ಮದ ಜ್ಞಾನಕ್ಕೂ ಭಾಷೆಯ ಶಿಕ್ಷಣವೇ ಅತ್ಯವಶ್ಯವೆಂಬುದು ಗೊತ್ತಾಗುವುದು

ಮಾನವರ ಪೂರ್ವಜರಲ್ಲಿರುವ ಬಳಕೆಯ ಅಂಗ ಭಂಗಿಗಳು ಮಾತಿನ ರೂಪವನ್ನು ತಾಳಿದವು ಆಗ ಪ್ರಾಣಿಗಳಂತೆಯೇ ಇರುವ ಮಾನವನ ಅಖಂಡ ಸ್ವರವು, ವಿವಿಧ ತುಂಡು ತುಂಡುಗಳನ್ನು ಹೊಂದಿ, ಮೂಲ ಶಬ್ದರೂಪವನ್ನು ಪಡೆಯಿತು. ಅದಕ್ಕೊಂದು ನಿಶ್ಚಿತ ಅರ್ಥ ಬಂದು, ಇಂದಿನ ಪ್ರೌಢ ಭಾಷೆಯ ಸ್ಥಿತಿಗೆ ಅದು ಬಂದು ನಿಂತುದು ಭಾಷಾ ಶಿಕ್ಷಣದಿಂದಲೇ ಇದನ್ನು ಗಮನಿಸಿದಾಗ ಸೃಷ್ಟಿಯಲ್ಲಿ, ಮಾನವನ ಜೀವನ ವಿಕಾಸದಲ್ಲಿ ಭಾಷಾ ಶಿಕ್ಷಣದ ಪಾತ್ರ ಎಂಥದೆಂಬುದರ ಕಲ್ಪನೆಯಾಗುವುದು

## ೨. ವಿಷಯ ಸ್ವರೂಪ

ಭಾಷಾ ಶಿಕ್ಷಣದ ವಿಷಯ ವ್ಯಾಪ್ತಿಯನ್ನು ಈಗ ತಿಳಿದುಕೊಂಡಂತಾಯಿತು. ಇನ್ನು ಅದರ ಸ್ವರೂಪದ ವಿವರಣೆ ಮಗುವು ಜನಿಸಿದಂದಿನಿಂದ ಭಾಷೆಯನ್ನು ಕಲಿಯಹತ್ತುವುದು ಕೂಸು ಹುಟ್ಟಿದ ಮೇಲೆ ಚೀರುವುದರಿಂದಲೇ ಮಾತಿಗೆ ಮೊದಲಾಗುವುದು ಆರಂಭದಲ್ಲಿ ಇದಕ್ಕೆ ಯಾವ ಭಾವವೂ ಇರುವದಿಲ್ಲ ಅದೊಂದು ಸ್ವಾಭಾವಿಕ ಕ್ರಿಯೆಯಾಗಿರುವುದು ಮಗುವಿನ ಕಂಠದೊಳಗಿನ ಧ್ವನಿಪೆಟ್ಟಿಗೆಯ ಮೇಲೆ ಹವೆಯ ಒತ್ತುವಿಕೆಯಿಂದ ಈ ಸ್ವರವು ಉದ್ಭವಿಸುವುದು ಮುಂದೆ ಅದರಲ್ಲಿ ಸುಖ-ದುಃಖದ ಭಾವನೆಗಳು ಸಮಾವೇಶವಾಗುತ್ತ ಹೋಗುತ್ತವೆ

ಮುಂದೆ ಮಗುವು ಆಡ ಆಡುತ್ತ 'ಅ' ಎನ್ನುವುದು, 'ಊ'ಎನ್ನುವುದು ತನ್ನ ಉಚ್ಚಾರವನ್ನು ತನ್ನ ಕಿವಿಯಿಂದ ಕೇಳಿ,ಆನಂದವಡುವುದು ತಿರುತಿರುಗಿ ಅವುಗಳನ್ನು ಉಚ್ಚರಿಸುವುದು ಮಗುವಿನ ಸಹಜ ಉಚ್ಚಾರವಾದ 'ಅ', 'ಊ' ಗಳನ್ನು ಸೇರಿಸಿ, ಹತ್ತರ ಇದ್ದ ಹಿರಿಯರು, ತಮ್ಮ ಕೂಸು ಅ ಊ, ಅವ್ವಾ ಎನ್ನಹತ್ತಿತೆಂದು ಹಿರಿ ಹಿರಿ ಹಿಗ್ಗುವರು ಮಗುವಿಗೆ ತಾಯಿಯನ್ನು ತೋರಿಸಿ, 'ಅವ್ವಾ' ಬಂದಳೆನ್ನುವರು ಅದು 'ಅ,ಈ' ಎಂದು ಉಚ್ಚರಿಸಿದಾಗ ತಾವೂ ಅದರಂತೆ ಉಚ್ಚರಿಸಿ, ಅಜ್ಜಿಯನ್ನು ತೋರಿಸುವರು ಮಗುವಿನ 'ಕಾ,ಕಾ' ಧ್ವನಿಯು ಕಕ್ಕನ ನಿದರ್ಶಕವಾಗುವುದು ಹೀಗೆ ಮಗುವಿನ ಭಾಷಾ ಶಿಕ್ಷಣ ಆರಂಭವಾಗುವುದು ಬರಬರುತ್ತ ಮಕ್ಕಳಿಗೆ ಹಿರಿಯರ ಅನೇಕ ಮಾತುಗಳ ಅರ್ಥವಾಗತೊಡಗುವುದು ತನಗೆ ಉಚ್ಚರಿಸಲಿಕ್ಕೆ ಬರದಿದ್ದರೂ ಹಿರಿಯರು ಹೇಳಿದ ಮಾತಿನ ಭಾವವನ್ನು ತಿಳಿದುಕೊಂಡು, ಅದರಂತೆ ವರ್ತಿಸುವ ಮಕ್ಕಳ ಜೀವನವನ್ನು ನಾವು ಕಾಣುತ್ತೇವೆ ಮನೆಯಲ್ಲಿ ಮುದುಕರು ಚಿಲುಮೆ ತೆಗೆದು, ' ಹಾ, ತಾ ' ಎಂದು ಮೂರು ವರ್ಷದ ಮಗುವಿಗೆ ಹೇಳಿದರೆ ಒಳಗೆ ಹೋಗಿ, ತಾಯಿಯು ಕೊಟ್ಟ ಕೊಳ್ಳಿಯನ್ನು ತಂದು ಅಜ್ಜನಿಗೆ ಕೊಡುವ ಮಕ್ಕಳನ್ನು ಕಾಣುತ್ತೇವೆ ಅವೇ ಮಕ್ಕಳು ಕೆಲದಿನ ಕಳೆದ ಮೇಲೆ ' ಅವ್ವಾ-ಅಜಾ-ಹಾ-ತಾ-' ಎಂದು ಹೇಳಿ, ತಾಯಿಯ ಹತ್ತರ ಬೆಂಕಿಯನ್ನು ಬೇಡುತ್ತವೆ. ಆಗ

ಒಂದೊಂದು ಅಕ್ಷರ, ಒಂದೊಂದು ಶಬ್ದಗಳ ವಾಕ್ಯ ರಚನೆಯನ್ನು ಮಕ್ಕಳು ಮಾಡಹತ್ತುವವು ಒಮ್ಮೊಮ್ಮೆ ಮಗುವು ಕೈ ಮಾಡಿ, 'ತಾ' ಎಂದಾಗ 'ಮಾ ಬೇಕು?" ಎಂದು ಕೇಳಿ ದೊಡ್ಡವರು ಕೊಡುವರು ಮಗುವು 'ಮಾ ಬೇಕು' ಎನ್ನುವದು ಆಗ ನೀರು ಕೊಡುವರು ಮತ್ತೊಮ್ಮೆ ಮಗುವಿಗೆ ನೀರಡಿಕೆಯಾದಾಗ ಕೂಸು 'ಮಾ' ಎನ್ನುವುದು 'ಮಾ ಬೇಕು' ಎನ್ನುವುದು 'ಅಮ್ಮಾ ಬೇಕು' ಎನ್ನುವುದು ಇದರಂತೆ ಮಕ್ಕಳ ಭಾಷಾ ಶಿಕ್ಷಣ ಬೆಳೆಯುತ್ತ ಹೋಗುವುದು. ಈ ಅವಸ್ಥೆಯಲ್ಲಿ ಭಾಷಾ ಶಿಕ್ಷಣದ ತಳಹದಿಯು ಅನುಕರಣವಾಗುವುದು ಹೀಗೆ ಮಗುವಿನ ಭಾಷಾಜ್ಞಾನದ ಬೆಳವಣಿಗೆಯಾಗುವುದು ಈ ಜ್ಞಾನದ ವಿಕಾಸವು ಎಲ್ಲ ಮಕ್ಕಳಲ್ಲಿ ಸ್ವಾಭಾವಿಕವಾಗಿಯೇ ಆಗುವುದು. ಆದರೂ ಆಯಾ ಮಕ್ಕಳ ಮನೆಯ ವಾತಾವರಣ, ಸುತ್ತಲಿನ ಜನರ ಪರಿಸ್ಥಿತಿಯ ಮೇಲೆ ಅವರ ಭಾಷಾಜ್ಞಾನ ಹಾಗೂ ಸ್ವರೂಪ ಅವಲಂಬಿಸಿರುತ್ತದೆ

ಮಗುವಿನ ಈ ಸಹಜ ಭಾಷಾ ವಿಕಾಸದಲ್ಲಿಯೂ ಭಾಷಾ ಶಿಕ್ಷಣದ ಕೆಲವೊಂದು ತತ್ತ್ವಗಳನ್ನು ನಾವು ಕಂಡು ಹಿಡಿಯಬಹುದು ೧) ಮಗುವು ತಾನು ಉಚ್ಚರಿಸಿದ್ದನ್ನು ತಾನು ಕೇಳುವುದು ೨) ಹಿರಿಯರು ಹೇಳಿದ್ದನ್ನು ತಿಳಿದುಕೊಳ್ಳುವುದು ೩) ಹಿರಿಯರು ತೋರಿಸಿದ ವಸ್ತು ಹಾಗೂ ಹೇಳಿದ ಶಬ್ದಗಳಿಗೆ ಹೊಂದಿಸುವುದು ಇದರಲ್ಲಿ ಕ್ರಿಯೆ ಮತ್ತು ಪದಗಳ ಹೊಂದಿಕೆಯೂ ಸಮಾವೇಶವಾಗುವುದು ೪) ಹೀಗೆ ಹೊಂದಿಸಿದ್ದನ್ನು ತಾನು ತಿರುಗಿ ಉಚ್ಚರಿಸುವದು ೫) ಹಿರಿಯರು ಉಚ್ಚರಿಸಿದಂತೆ ಉಚ್ಚರಿಸಲಿಕ್ಕೆ ಪ್ರಯತ್ನಿಸುವುದು ೬) ತನ್ನ ಬೇಡಿಕೆಯನ್ನು ವ್ಯಕ್ತಪಡಿಸುವುದು ಇವೇ ಕ್ರಿಯೆಗಳನ್ನು ಶೈಕ್ಷಣಿಕ ಪಾರಿಭಾಷಿಕ ಪದಗಳಲ್ಲಿ ಹೀಗೆ ಕ್ರಮದಿಂದ ಸೂಚಿಸಬಹುದು – ೧) ಶ್ರವಣಶಕ್ತಿ ೨) ಬೋಧನ ಶಕ್ತಿ ೩) ಸಾಹಚರ್ಯಶಕ್ತಿ ೪) ಪುನರುಚ್ಚಾರಶಕ್ತಿ ೫) ಅನುಕರಣ ಶಕ್ತಿ ೬) ನಿವೇದನ ಶಕ್ತಿ ಈ ಷಟ್‌ಸ್ಥಲಗಳೇ ಭಾಷಾಶಿಕ್ಷಣದ ಮೂಲ ತತ್ತ್ವಗಳೆಂದು ನಾವು ಈಗ ನಿರ್ಧರಿಸಬಹುದು

ಇಲ್ಲಿ ಭಾಷಾಶಿಕ್ಷಣದ ಮೂಲ ತತ್ತ್ವಗಳನ್ನು ಗುರುತಿಸಿದೆವು. ಈ ತತ್ತ್ವಗಳಿಗೆ ಪ್ರತಿಯೊಂದಕ್ಕೂ ಮಕ್ಕಳ ಒಂದೊಂದು ಸಹಜ ಶಕ್ತಿಯು ತಳ

ಹದಿಯಾಗಿದೆ—ಎಂಬುದನ್ನೂ ಅರಿತೆವು. ಆದರೆ ಕೇವಲ ಈ ಸ್ವಾಭಾವಿಕ ಶಕ್ತಿಯ ಬಲವನ್ನು ಅವಲಂಬಿಸಿಯೇ ಭಾಷಾಶಿಕ್ಷಣವನ್ನು ಪೂರ್ಣಗೊಳಿಸುವೆವೆಂಬದನ್ನು ಹೇಳಲಿಕ್ಕಾಗದು ಅದರಿಂದ ಈ ಶಿಕ್ಷಣಕ್ಕೊಂದು ಕ್ರಮವು ಬೇಕು ಆ ಕ್ರಮವು ಮಕ್ಕಳ ಸಹಜ ಶಕ್ತಿಯ – ಮೇಲ್ಕಾಣಿಸಿದ – ವಿಕಾಸಕ್ಕೆ ಅನುಗುಣವಾಗಿ ವಿಸ್ತಾರಗೊಳ್ಳುತ್ತ ಹೋಗಬೇಕು ಇದನ್ನು ಲಕ್ಷಿಸಿ ಭಾಷಾಶಿಕ್ಷಣದಲ್ಲಿ ಮಕ್ಕಳ ವಯೋಮರ್ಯಾದೆಯ ಕೆಲವು ಹಂತಗಳನ್ನು ನಾವು ಕಲ್ಪಿಸಿಕೊಳ್ಳಬಹುದು ಆಯಾ ಹಂತಗಳಲ್ಲಿ ಮಕ್ಕಳಿಗೆ ಮಾಡಿಸಬಹುದಾದ ಭಾಷಾಭ್ಯಾಸದ ಸ್ಥೂಲ ಚಿತ್ರವನ್ನೂ ರೂಪಿಸಬಹುದು ಆಮೇಲೆ ಅದಕ್ಕೊಂದು ಕ್ರಮವನ್ನು ಸೂಚಿಸಬಹುದು ಈ ರೀತಿಯಲ್ಲಿ ಇಲ್ಲಿಯ ವಿಷಯ ವಿವೇಚನೆಯ ಸಾಮಾನ್ಯ ಸ್ವರೂಪವಿದೆ



# ಸಾಧನ ಚತುಷ್ಟಯ

ಮಕ್ಕಳು ಮಾತೃಭಾಷೆಯನ್ನು ಸ್ವಾಭಾವಿಕವಾಗಿಯೇ ಕಲಿತುಕೊಳ್ಳುವರು ಅದು ಅವರ ನೈಸರ್ಗಿಕ ಶಕ್ತಿಯಾಗಿದೆ ಈ ಶಕ್ತಿಯೂ ಕೂಡ ಸುತ್ತಲಿನ ಜನರಿಂದಲೇ ಬರುವದೆನ್ನಬೇಕಾಗುವುದು ಯಾಕೆಂದರೆ ನಿರ್ಜನ ಸ್ಥಳದಲ್ಲಿ ಬೆಳೆದ ಮಗುವು ಭಾಷೆಯನ್ನು ಕಲಿಯಲಾರದು ಅಂದಮೇಲೆ ಮಕ್ಕಳ ಭಾಷಾ ಶಿಕ್ಷಣದಲ್ಲಿ ಪಾಲಕರ ಹೊಣೆ ಎಷ್ಟೆಂಬುವರ ಕಲ್ಪನೆಯು ಬರುವದು

ಭಾರತದಲ್ಲಿ ಇಂಥ ಹೊಣೆಗಾರಿಕೆಯನ್ನು ಅರಿತ ಪಾಲಕರು ತೀರ ವಿರಳ ಅವರ ಕಾರ್ಯವನ್ನೂ ಕೂಡ ಪ್ರಾಥಮಿಕ ಶಾಲೆಗಳ ಶಿಕ್ಷಕರೇ ನಿರ್ವಹಿಸಬೇಕಾಗುವುದು ಆದರೆ ಮಗುವು ಶಾಲೆಗೆ ಬರುವಷ್ಟರಲ್ಲಿ ತನ್ನ ದಾದುದೊಂದು ಭಾಷಯನ್ನು ಕಲಿತುಕೊಂಡಿರುತ್ತದೆ ಅದು ಅವನ ಪರಿಸರಕ್ಕೆ ಅನುಗುಣವಾಗಿ ರೂಪುಗೊಂಡಿರುತ್ತದೆ ಇದೇ ಪ್ರಕಾರ ವಿವಿಧ ಆವರಣದಲ್ಲಿ ಬೆಳೆದ ಹಲವು ಮಕ್ಕಳಿಂದ ಒಂದು ವರ್ಗವಾಗಿರುತ್ತದೆ ಅದರಿಂದ ಪ್ರಾಥಮಿಕ ಶಾಲೆಗಳ ಒಂದೇ ವರ್ಗದಲ್ಲಿ ಅನೇಕ ಮಾದರಿಯ ಭಿನ್ನ ಭಿನ್ನ ಅವಸ್ಥೆಯ ಭಾಷೆಯುಳ್ಳ ಮಕ್ಕಳು ಇರುತ್ತಾರೆ ಇಂಥ ಒಂದು ತರಗತಿಗೆ ಮಾತೃಭಾಷೆಯನ್ನು ಕಲಿಸುವದಿರುತ್ತದೆ ಈ ಕಾರ್ಯದಲ್ಲಿ ಪ್ರಾದಮಿಕ ಶಿಕ್ಷಕನು ಮಕ್ಕಳ ನೈಸರ್ಗಿಕ ಶಕ್ತಿಯನ್ನು ಅಲ್ಲಗಳೆಯದೆ ಭಾಷಾಭ್ಯಾಸವನ್ನು ಮುಂದುವರಿಸಬೇಕಾಗುವುದು ಅಂದರೆ ಭಾಷಾ ಶಿಕ್ಷಣದ ನೈಸರ್ಗಿಕ ಪದ್ಧತಿ, ಅಭ್ಯಾಸ ಪದ್ಧತಿಗಳನ್ನು ಸಮನ್ವಯ ಮಾಡಿಕೊಂಡು ಶಿಕ್ಷಣ ಕಾರ್ಯವನ್ನು ನಾಗಿಸಬೇಕು. ಅದರಲ್ಲೂ ನೈಸರ್ಗಿಕ ರೀತಿಯನ್ನು ಅಭ್ಯಾಸ ಪದ್ಧತಿಯಿಂದ ಸುಧಾರಿಸುವ ಕಡೆಗೆ ಶಿಕ್ಷಕನು ಮುಖ್ಯವಾಗಿ ಗಮನಕೊಡದೆ ನಡೆಯುವಂತಿಲ್ಲ

ಭಾಷಾ ಶಿಕ್ಷಣದ ನೈಸರ್ಗಿಕ ಶಕ್ತಿ ಎನ್ನೋಣ ಇಲ್ಲವೆ ನೈಸರ್ಗಿಕ ಪದ್ಧತಿ ಎನ್ನುವ ಯಾವ ಹೆಸರಿನಿಂದ ಕರೆದರೂ ಈ ಪದ್ಧತಿಗೆ ಬುದ್ಧಿಪೂರ್ವಕವಾಗಿ ಪ್ರಯತ್ನದ ಅವಶ್ಯಕತೆ ಇರುವದಿಲ್ಲ ಅದು ಸ್ವಾಭಾವಿಕವಾಗಿ ಬಂದುದಾಗಿರುತ್ತದೆ ಮಗುವು ಉದ್ದೇಶಪೂರ್ವಕವಾಗಿಯಾಗಲಿ, ಬುದ್ಧಿಪೂರ್ವಕ

ವಾಗಿಯಾಗಲಿ ಮಾತನಾಡಲು ಎಂದೂ ಆರಂಭಿಸುವದಿಲ್ಲ ಸ್ವಾಭಾವಿಕವಾಗಿ ಅವನಗೂಡ ಅದೂ ಬೆಳವಣಿಗೆಯನ್ನು ಹೊಂದಿರುತ್ತದೆ ಆದರೆ ಈ ಸ್ವಾಭಾವಿಕ ಬಾಷಾ ವಿಕಾಸಕ್ಕೆ ಅವನ ಶ್ರವಣ ಶಕ್ತಿಯು ಸಹಕಾರವನ್ನು ನೀಡಿರುತ್ತದೆ ಅದಕ್ಕಂತೇ ಶ್ರವಣ ಶಕ್ತಿಗೆ ಭಾಷಾಭ್ಯಾಸದಲ್ಲಿ ಬಹಳ ಮಹತ್ವದ ಸ್ಥಾನವಿದೆ ಮೂಕರೆಂದರೆ ಹುಟ್ಟು ಕಿವುಡರೆಂದೇ ಶಾಸ್ತ್ರಜ್ಞರು ಹೇಳುವ ಮಾತಿನಲ್ಲಿಯೂ ಈ ಶ್ರವಣ ಭಾಷಣ ಶಕ್ತಿಗಳ ಅನ್ಯೋನ್ಯತೆಯ ಅರ್ಥವೇ ಧ್ವನಿತವಾಗುವುದು ಅದರಿಂದ ಸ್ವಾಭಾವಿಕ ಅಥವಾ ನೈಸರ್ಗಿಕವೆನಿಸುವ ಭಾಷಾ ಶಿಕ್ಷಣ ಪದ್ಧತಿಗೆ ಭಾಷಣ ಶ್ರವಣಗಳೆಂದು ಎರಡು ಅಂಗಗಳೆನ್ನು ಸೂಚಿಸಬಹುದು. ಇವುಗಳಿಗೆ ಮಾತಾಡುವುದು, ಕೇಳುವುದು—ಎಂದೂ ಹೇಳಬಹುದು

ಇನ್ನೊಂದು ಬಾಷಾ ಶಿಕ್ಷಣದ ಅಭ್ಯಾಸ ಪದ್ಧತಿಯು ಇದು ನೈಸರ್ಗಿಕವಾದುದಲ್ಲ ಅದಕ್ಕೆ ಇದನ್ನು ಕೃತ್ರಿಮ ಪದ್ಧತಿಯೆಂದೂ ಕರೆಯಬಹುದು ಇದರಲ್ಲಿ ಮಕ್ಕಳು ಬುದ್ಧಿಪೂರ್ವಕವಾಗಿಯೂ ಮನಃಪೂರ್ವಕವಾಗಿಯೂ ಅಭ್ಯಾಸ ಮಾಡಬೇಕಾಗುತ್ತದೆ ಆಗ ಮಕ್ಕಳು ಅನೇಕ ಸಂಗತಿಗಳ ಕಡೆಗೆ ಲಕ್ಷ್ಯಕೊಡಬೇಕು, ನಿಯಮ—ನಿರ್ಬಂಧಗಳನ್ನು ತಿಳಿದುಕೊಳ್ಳಬೇಕು, ಅವಶ್ಯಕ ಸಂಗತಿಗಳ ಮನನ ಮಾಡಬೇಕು, ವಿಚಾರ ಮಾಡಬೇಕು, ಅನುಮಾನ ಕಟ್ಟಬೇಕು, ನಿರ್ಣಯಕ್ಕೆ ಬರಬೇಕು ಇಲ್ಲಿ ವಿದ್ಯಾರ್ಥಿಗಳ ಬುದ್ಧಿ ಭಾವಗಳೆರಡೂ ಹುರಿಗೊಂಡಿರಬೇಕಾಗುತ್ತದೆ ಹೀಗೆ ಮಾನಸಿಕ ಅಭ್ಯಾಸವಲ್ಲದೆ ವಾಕ್ಯರಚನೆಯ ಕ್ರಮ, ಶಬ್ದದ ಶುದ್ಧರೂಪ, ಅದರ ಉತ್ಪತ್ತಿ ಲೇಖನ ವಿಧಾನ, ವಾಕ್ಯವೃಂದದ ಕಲ್ಪನೆ, ಓದುವದು, ವ್ಯಾಕರಣ, ಛಂದಸ್ಸುಗಳ ವಿಚಾರಗಳನ್ನೆಲ್ಲ ಅತ್ಯವಶ್ಯವಾಗಿ ತಿಳಿದುಕೊಳ್ಳಬೇಕಾಗುತ್ತದೆ ಕಲಿತುಕೊಳ್ಳಲೂ ಬೇಕಾಗುತ್ತದೆ. ಅದರಿಂದ ಈ ಪದ್ಧತಿಯಲ್ಲಿ ಕಣ್ಣುಗಳೂ ಕೈಯೂ ಮುಖ್ಯವಾಗಿ ಕಾರ್ಯಮಾಡಬೇಕಾಗುತ್ತದೆ. ಅಂದರೆ ಓದುವದೂ ಬರೆಯುವುದೂ ಸಾಗುವದು. ಇದರಿಂದ ಭಾಷಾ ಶಿಕ್ಷಣದ ಅಭ್ಯಾಸ ಪದ್ಧತಿಯಲ್ಲಿ ವಾಚನ ಲೇಖನಗಳೆಂದು ಎರಡು ಅಂಗಗಳನ್ನು ನಿರೂಪಿಸಬೇಕಾಗುವುದು

ಭಾಷಾ ಶಿಕ್ಷಣವನ್ನು, ನೈಸರ್ಗಿಕ ಪದ್ಧತಿ, ಅಭ್ಯಾಸ ಪದ್ಧತಿಗಳೆರಡನ್ನೂ ಉಪಯೋಗಿಸಿ ಕೊಡುವದಿರುತ್ತದೆ ಇವು ಒಂದಕ್ಕೊಂದು ಪೂರಕವಾದ ಪದ್ಧತಿಗಳಾಗಿವೆ ಅದರಿಂದ ಭಾಷಾ ಶಿಕ್ಷಣಕ್ಕೆ ಮಾತಾಡುವುದು, ಕೇಳು ವುದು, ಓದುವುದು, ಬರೆಯುವುದು– ಇವುನಾಲ್ಕು ಮುಖ್ಯ ಸಾಧನಗಳಾಗಿವೆ ಇವುಗಳಿಗೇನೇ ಇಲ್ಲಿ ಭಾಷಾಶಿಕ್ಷಣದ 'ಸಾಧನ ಚತುಷ್ಟಯ'ಗಳೆಂದು ಹೇಳಿ ವಿವೇಚಿಸಲಾಗಿದೆ ಈ ಸಾಧನ ಚತುಷ್ಟಯಗಳನ್ನು ಶೈಕ್ಷಣಿಕ ಪರಿಭಾಷೆ ಯಲ್ಲಿ ನಿವೇದನ, ಶ್ರವಣ, ವಾಚನ, ಲೇಖನಗಳೆಂದೂ ಹೇಳಬಹುದು

## ನಿವೇದನ

ಮಾನವನು ಮಾತನಾಡುವುದರಿಂದ ತನ್ನ ಮನಸ್ಸನ್ನು ಇನ್ನೊಬ್ಬ ರಿಮರು ಪ್ರಕಟಿಸುವನು ಅದರಿಂದ ನಿವೇದನವು ಆತ್ಮ ಪ್ರಕಾಶನದ ಸಾಧನ ವಾಗಿದೆ ತನಗೆ ತೋರಿದುದನ್ನು, ತನಗೆ ಬೇಕಾದುದನ್ನು, ತನಗೆ ಒಲ್ಲದು ದನ್ನು, ಅನುಭವಿಸಿದ್ದನ್ನು ಒಟ್ಟಾರೆ ತನ್ನ ಎಲ್ಲ ಮನೋಗತ ವ್ಯಾಪಾರವನ್ನು ಮನುಷ್ಯನು ತನ್ನ ಮಾತಿನಿಂದ ವ್ಯಕ್ತಪಡಿಸುವನು ಅದಕ್ಕಾಗಿ ಈ ನಿವೇದನ ಚಾತುರ್ಯದಿಂದಲೇ ಮಾನವನು ಬಹುಮಟ್ಟಿಗೆ ಜೀವನದಲ್ಲಿ ಯಶಸ್ವಿಯಾಗು ವನು. ಇದನ್ನರಿತ ನಮ್ಮ ಪೂರ್ವಿಕರು 'ಮಾತುಬಲ್ಲವ ಮಾಣಿಕತಂದ, ಮಾತರಿಯದವ ಜಗಳತಂದ' ಎಂದು ತಮ್ಮ ಅನುಭವ ವಚನವನ್ನು ಹೇಳಿ ದ್ದಾರೆ ಇನ್ನೂ ಮುಂದಕ್ಕೆ ಹೋಗಿ 'ಮಾತೇ ಜ್ಯೋತಿರ್ಲಿಂಗ'ವೆಂದು ಸಾರಿದ ಶರಣರೂ ಇದ್ದಾರೆ ಮಾತು ಪ್ರಕಾಶಪುಂಜ ಎನ್ನುವ ಶರಣರ ಮಾತಿನಲ್ಲಿ ಎಂಥ ಸಾರ್ಥಕತೆಯಿದೆ! ಮಾತಿನ ಮಹತಿಯು ಕಲ್ಪನೆ ದೇವತ್ವಕ್ಕೆ ಇಲ್ಲಿ ಮುಟ್ಟಿದುದನ್ನು ನಾವು ಕಾಣುತ್ತೇವೆ

ಜ್ಞಾನಿಗಳು ಮಾತುಗಾರಿಕೆಯನ್ನು ಕುರಿತು ಇಷ್ಟು ಹೇಳಬೇಕಾದರೆ ಪೂರ್ಣ ಜ್ಞಾನಸಂಪಾದನೆಗೆ ಮಾತೇ ಸಾಧನವೆಂಬುದನ್ನು ಅವರು ಅನುಭವ ದಿಂದ ಕಂಡುಕೊಂಡಿರಲಿಕ್ಕೆ ಬೇಕು ಯಾಕಂದರೆ ಹೊರಗಿನ ಜಗತ್ತು ವ್ಯಕ್ತಿಯ ಮೇಲೆ ಮಾಡಿದ ಪರಿಣಾಮವು ಪ್ರತಿಫಲಿಸುವುದು ವಚನದ ಮೂಲಕವೇ ಪ್ರಪಂಚದಲ್ಲಿ ಕ್ಷಣಕ್ಷಣಕ್ಕೂ ಮನುಷ್ಯನಿಗೆ ಒದಗುವ ಹೊಸ ಹೊಸ ಜ್ಞಾನವು ವ್ಯಕ್ತಿಗಳ ಪೂರ್ವಜ್ಞಾನ, ಅನುಭವಗಳ ಒರೆಗಲ್ಲಿಗೆ ನಿಂತು

ಆಮೇಲೆ ನಿವೇದನದ ರೂಪದಲ್ಲಿ ಪ್ರತಿಕ್ರಿಯೆಯನ್ನು ತೋರುವುದು ಇದಕ್ಕೇನೇ ಆತ್ಮಾವಿಷ್ಕಾರವೆಂದು ಹೇಳಲಾಗುತ್ತದೆ. ಇದು ಆತ್ಮವಿಕಾಸದ ಸಾಧನವಾಗಿದೆ ಹೊರಗಿನ ಜ್ಞಾನವನ್ನು ಗ್ರಹಿಸುವುದೂ ಅಂತರಂಗವನ್ನು ಅಭಿವ್ಯಕ್ತಗೊಳಿಸುವುದೂ ಇವೆರಡೂ ಕ್ರಿಯೆಗಳು ಚೆನ್ನಾಗಿ ನಡೆದರ ವ್ಯಕ್ತಿಯು ಜ್ಞಾನಸಂಪಾದನೆಯಲ್ಲಿ ಯಶಸ್ವಿಯಾಗುವನು ಅದರಿಂದ ಈ ಎರಡೂ ಕ್ರಿಯೆಗಳಿಗೆ ಶಿಕ್ಷಣದಲ್ಲಿ ಬಹಳ ಮಹತ್ವದ ಸ್ಥಾನವುಂಟು.

ಮಾತುಗಾರಿಕೆಯು ಮೇಲು ನೋಟಕ್ಕೆ ತೀರ ಸುಲಭ ಸಾಧ್ಯವಾದ ವಿಷಯವೆಂದು ತೋರಬಹುದು ಆದರೆ ಅದು ಅಷ್ಟು ಸುಲಭವಲ್ಲ ಮಾತನಾಡುವಾಗ ಮಾತಾಡುವ ವ್ಯಕ್ತಿಯು ಯಾವಾಗ, ಎಲ್ಲಿ, ಎಷ್ಟು, ಹೇಗೆ ಮಾತನಾಡಬೇಕೆಂಬುದನ್ನೆಲ್ಲ ಅರಿತುಕೊಂಡಿರಬೇಕಾಗುವುದು ಅಲ್ಲದೆ ತನ್ನ ಮಾತಿನ ಪ್ರತಿಕ್ರಿಯೆಯು ಎದುರಿಗಿನವರ ಮೇಲೆ ಹೇಗಾಗುತ್ತಿದೆ, ಎಂಬುದನ್ನೂ ಅವನು ಗಮನಿಸಬೇಕು ಮೇಲಾಗಿ ಭಾವಕ್ಕೆ ತಕ್ಕ ಅಭಿನಯ ಬೇಕು ಅದೂ ಹೃತ್ಪೂರ್ವಕವಾಗಿರಬೇಕು ಧ್ವನಿಯು ಸ್ಪಷ್ಟ, ಶಬ್ದಗಳ ಉಚ್ಚಾರ ಶುದ್ಧ, ವಿಷಯಗಳಿಗೆ ತಕ್ಕಂತೆ ಏರಿಳಿವುಗಳಿಂದ ಕೂಡಿದ ಮಧುರ ಸ್ವರ—ಇವೆಲ್ಲವುಗಳು ಮಾತುಗಾರಿಕೆಯ ಯಶಸ್ಸಿನ ಬೀಗದ ಕೈಗಳಿದ್ದಂತೆ ಇವೆ ಇವುಗಳನ್ನೆಲ್ಲ ಗಮನಿಸಿ, ವಿದ್ಯಾರ್ಥಿಗಳಿಗೆಲ್ಲ ನಿವೇದನ ಕಲೆಯನ್ನು ಶಿಕ್ಷಕನು ಕಲಿಸುವದಿರುತ್ತದೆ.

ಇದನ್ನು ಸಾಧಿಸುವಾಗ ಶಿಕ್ಷಕರು ಒಂದು ಮಾತನ್ನು ಲಕ್ಷದಲ್ಲಿ ಇಡಬೇಕಾಗುವುದು. ಮೊದಲು ವರ್ಗದೊಳಗಿನ ಕೃತ್ರಿಮ ವಾತಾವರಣ ತೊಲಗುವಂತೆ ನೋಡಿಕೊಳ್ಳಬೇಕು ಮಕ್ಕಳು ಮನಬಿಚ್ಚಿ ಮಾತನಾಡಲಿಕ್ಕೆ ಅವಕಾಶವನ್ನು ಕಲ್ಪಿಸಿ ಕೊಡಬೇಕು. ಅದರಿಂದ ಮಾತುಗಾರಿಕೆಯಲ್ಲಿ ಸ್ಪಷ್ಟತೆ, ಮತ್ತು ಜೋರುಗಳು ತನ್ನಿಂದ ತಾನೇ ಮೂಡಿಬರುತ್ತವೆ ತಮ್ಮ ಓರಿಗೆಯವರೊಡನೆ ತಾನು ಆಡಿದ ಆಟ, ನೋಡಿದ ನೋಟ, ಓದಿದ ರೀತಿಗಳನ್ನು ಸ್ಫೂರ್ತಿಯಿಂದ ತನಗೆ ಬರುವ ಸ್ವಾಭಾವಿಕ ಮಾತುಗಳಲ್ಲಿ ಮಕ್ಕಳು ನಿವೇದಿಸುವಂತೆಯೇ ವರ್ಗದಲ್ಲೂ ಕೂಡ ಮಾತುಗಾರಿಕೆಯು ನಡೆಯಬೇಕು

ಇನ್ನು ವಿವಿಧ ವಾತಾವರಣದಲ್ಲಿ ಬೆಳೆದ ಮಕ್ಕಳ ಭಾಷೆಯಲ್ಲಿ ಶುದ್ಧಾಶುದ್ಧತೆಯ ಅನೇಕ ರೂಪಗಳೂ ಇರುತ್ತವೆ ಇವನ್ನು ಸಂಸ್ಕಾರಗೊಳಿಸಿ,

ಒಂದು ಸುಸಂಸ್ಕೃತ ಭಾಷೆಯನ್ನು ವರ್ಗದ ವಿದ್ಯಾರ್ಥಿಗಳಲ್ಲಿ ಸ್ಥಿರಗೊಳಿಸುವದಿರುತ್ತದೆ ಅದಕ್ಕಾಗಿ ಶಿಕ್ಷಕನು ತನ್ನ ಬಾಷೆಯನ್ನು ಶ ದ್ಧವಾಗಿಯೂ ಸ್ಪಷ್ಟವಾಗಿಯೂ ಇಟ್ಟುಕೊಂಡಿರಬೇಕು. ಮಕ್ಕಳು ಗುರುಗಳನ್ನು ಅನುಸರಿಸುವುದರಿಂದ ಅನುಕರಣ ಮಾಡುವುದರಿಂದ ತಮ್ಮ ಭಾಷೆಯನ್ನು ತಿದ್ದಿಕೊಳ್ಳುತ್ತಾರೆ ಅದರೊಡನೆ ಅವಶ್ಯವಿದ್ದಲ್ಲಿ ಕಲವು ಮಕ್ಕಳ ಭಾಷಾ ದೋಷಗಳನ್ನು ಶಿಕ್ಷಕರು ಬುದ್ಧಿಪೂರ್ವಕವಾಗಿ ತಿದ್ದಲು ಯತ್ನಿಸಬೇಕು. ಹಾಗೆ ಮಾಡುವಾಗ ಮಾತ್ರ ಆ ಮಕ್ಕಳಿಗೆ ಶಿಕ್ಷಕರು ತಮ್ಮ ಕಡೆಗೆ ಮನ ಪೂರ್ವಕವಾಗಿ ಹೆಚ್ಚು ಗಮನ ಕೊಡುವರೆಂಬುದು ತಿಳಿಯಕೂಡದು ವರ್ಗದಲ್ಲಿ ಉಳಿದವರಿಗಿಂತ ತಾವು ಹಿಂದುಳಿದವರೆಂಬ ಕಲ್ಪನೆಯು ಅವರನ್ನು ಹಿಂದೆಳೆಯುವದುಂಟು ಅದಕ್ಕಾಗಿ ಇದನ್ನು ಬಹು ಎಚ್ಚರದಿಂದ ಶಿಕ್ಷಕರು ಸಾಧಿಸಬೇಕಾಗುವುದು

ಶುದ್ಧಲೇಖನದ ತಳಹದಿಯು ಶುದ್ಧ ಮಾತುಗಾರಿಕೆಯಲ್ಲಿಯೇ ಇರುವುದು ಮೇಲಿನ ವರ್ಗಗಳಲ್ಲಿ ಬರಹ ಅಶುದ್ಧವಾಗಿರುವುದಕ್ಕೆ ಚಿಕ್ಕಂದಿನಲ್ಲಿ ಅವರು ಅಶುದ್ಧ, ಅಸ್ಪಷ್ಟ ಉಚ್ಚಾರ ಮಾಡುತ್ತಿರುವುದೇ ಕಾರಣವಾಗಿರುತ್ತದೆ ಅದರಿಂದ ಮಕ್ಕಳಲ್ಲಿರುವ ನ, ಣ, ಶ, ಸ, ಷ ಮೊದಲಾದ ವರ್ಣಗಳನ್ನು ಉಚ್ಚರಿಸುವಾಗಿನ ದೋಷಗಳನ್ನು ಶಿಕ್ಷಕರು ಲಕ್ಷ್ಯಗೊಟ್ಟು ತಿದ್ದಬೇಕಾಗುವುದು ಅದರಂತೆ ಸಂಯುಕ್ತಾಕ್ಷರ, ಅಲ್ಪಪ್ರಾಣ, ಮಹಾಪ್ರಾಣಗಳನ್ನು ಉಚ್ಚರಿಸುವಾಗ ನಾಲಿಗೆಯು ಹೇಗೆ ಹೊರಳುವುದು, ಎಲ್ಲಿ ಊರುವುದು ಮೊದಲಾದ ಸಂಗತಿಗಳನ್ನು ಶಿಕ್ಷಕರು ಅರಿತುಕೊಂಡಿರಬೇಕು ಅದಕ್ಕಾಗಿ ಉಚ್ಚಾರ ಶಾಸ್ತ್ರವನ್ನು ಅವರು ತಕ್ಕವಟ್ಟಿಗೆ ತಿಳಿದುಕೊಂಡವರೂ ಇರಬೇಕು ಅಲ್ಲದೆ ನಿವೇದನವನ್ನು ಚೆನ್ನಾಗಿ ಕಲಿಸಲು ವಿವಿಧ ಸಾಧನಗಳನ್ನು ಉಪಯೋಗಿಸಿ, ಭಾಷಾ ಶಿಕ್ಷಣದ ಮೂಲ ಅಂಗವಾದ ಇದನ್ನು ಭದ್ರವೂ ಸುವ್ಯವಸ್ಥಿತವೂ ಗೊಳಿಸಬೇಕು ಇದರಿಂದ ಮಕ್ಕಳ ಮುಂದಿನ ಪೂರ್ಣ ಶಿಕ್ಷಣವು ಯಶಸ್ವಿಯಾಗುವುದು ಅವರ ಭಾವೀ ಜೀವನವೂ ಸುಖಕರವಾಗುವುದು

ಶ್ರವಣ

ಮಗುವು ಚಿಕ್ಕಂದಿನಲ್ಲಿ ಶ್ರವಣೇಂದ್ರಿಯದ ಸಹಾಯದಿಂದಲೇ ಭಾಷೆಯನ್ನು ಕಲಿತಿರುವುದು ಅದೇ ಅದಕ್ಕೆ ರೂಢಿಯಾಗಿರುವುದು ಅದರಿಂದ

ಇನ್ನೊಬ್ಬರು ಹೇಳಿದ್ದನ್ನು ಲಕ್ಷ್ಯಗೊಟ್ಟು ಕೇಳುವುದು ಮಗುವಿನ ಸ್ವಭಾವವಾಗಿರುವುದು ಮಕ್ಕಳ ಕೇಳುವಿಕೆಯ ಶಕ್ತಿಯನ್ನು ಅವಲಂಬಿಸಿಯೇ ಆರಂಭದಲ್ಲಿ ಅವರ ಹೇಳುವಿಕೆಯು ವಿಸ್ತಾರಗೊಳ್ಳುತ್ತಿರುವುದು ಅದರಿಂದ ಶ್ರವಣ ಹಾಗು ನಿವೇದನಗಳು ಒಂದಕ್ಕೊಂದು ಪೂರಕವಾಗಿವೆ ಮಗುವು ವಿಷಯವನ್ನು ಚನ್ನಾಗಿ ತಿಳಿದುಕೊಂಡಷ್ಟು ಚೆನ್ನಾಗಿ ವಿವರಿಸುವುದು ಈ ತಿಳಿದುಕೊಳ್ಳುವ ಶಕ್ತಿಗೇನೇ ಶ್ರವಣವೆಂಬುದು ಸಾಧನವಾಗಿರುವುದು ಒಟ್ಟಾಗಿ ಈ ಕಾರ್ಯಕ್ಕೆ ಗ್ರಹಣವೆಂದೂ ಹೇಳಬಹುದು. ಇದು ಕೇವಲ ಕೇಳುವಿಕೆಯಿಂದಷ್ಟೇ ಪೂರೈಸುವದೆಂದಲ್ಲ ನೋಡುವುದರಿಂದ, ಮಾಡುವುದರಿಂದ, ಓದುವುದರಿಂದ ಮಕ್ಕಳ ಜ್ಞಾನಭಾಂಡಾರ ಬೆಳೆಯುತ್ತ ಹೋಗುವುದು ಜ್ಞಾನದ ಬೆಳವಣಿಗೆಯು ಆಯಾ ಮಕ್ಕಳ ಗ್ರಹಣಶಕ್ತಿಯನ್ನು ಅವಲಂಬಿಸಿದೆ ಈ ಶಕ್ತಿಯು ಪ್ರಬಲವಾಗಿದ್ದಷ್ಟು ನಿವೇದನವು ಸುಂದರವಾಗುವುದು

ಈಗ ನಿವೇದನ ಶಕ್ತಿಯು ಏಕಾಂಗಿಯಲ್ಲವೆಂಬುದು ಹೊಳೆಯುವುದು ಅದಕ್ಕೆ ಗ್ರಹಣಶಕ್ತಿಯ ಅವಶ್ಯಕತೆಯಿದೆ ಅದು ಶ್ರವಣ, ವಾಚನಗಳಿಂದ ಪೂರೈಸಲ್ಪಡುತ್ತದೆ ಮೂಲದಲ್ಲಿ ಭಾಷೆ ಎಂಬುದೇ ಸಾಮಾಜಿಕ ವಸ್ತುವಾಗಿದೆ ಇದು ಪರಸ್ಪರರಲ್ಲಿ ಕೊಡಕೊಳ್ಳುವುದರಿಂದ ಬದುಕುವುದು, ಬೆಳೆಯುವುದು ಅದರಿಂದ ಭಾಷಾ ಶಿಕ್ಷಣದಲ್ಲಿ ನಿವೇದನದಷ್ಟೇ ಶ್ರವಣಕ್ಕೂ ಮಹತ್ವದ ಸ್ಥಾನವಿದೆ ಅನ್ಯರ ಮಾತುಗಳನ್ನು ಸರಿಯಾಗಿ ತಿಳಿದುಕೊಳ್ಳುವುದು, ಲಕ್ಷ್ಯಗೊಟ್ಟು ಅದನ್ನು ಕೇಳುವುದು, ಆಗ ಅವರ ಮಾತಿನ ಭಾವವನ್ನು ಗ್ರಹಿಸಿದ ಬಗ್ಗೆ ನಮ್ಮ ಮುಖಭಾವವನ್ನು ವ್ಯಕ್ತಪಡಿಸುವುದು, ಅವರ ಮಾತು ಮುಗಿದ ಮೇಲೆ ನಮ್ಮ ಮಾತಿನಿಂದ ನಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವುದು— ಇವೆಲ್ಲ ಭಾಷಾಭ್ಯಾಸದ ಮೂಲ ತತ್ತ್ವಗಳು ಇವು ಸಾಮಾಜಿಕ ವ್ಯವಹಾರದ ತಳಹದಿಯಾಗಿಯೂ ನಿಲ್ಲುವವು ಅದರಿಂದ ಶ್ರವಣವೆಂಬುದು ಭಾಷಾಶಿಕ್ಷಣದ ಮುಖ್ಯ ಸಾಧನವಾಗಿದ್ದಷ್ಟೇ ಸಾಮಾಜಿಕ ಜೀವನದಲ್ಲಿ ಸಭ್ಯತೆಯೂ ಆಗಿದೆ ಈ ಸಭ್ಯತೆಯು ವ್ಯಕ್ತಿಯ ನಿವೇದನ ಶಕ್ತಿಯ ಬೆಳವಣಿಗೆಗೆ ಸಹಾಯಕವಾಗಿದೆ

## ವಾಚನ

ವಾಚನವು ಬಹುಶ್ರುತನಾಗುವುದಕ್ಕೆ ಮಾನವನಿಗೆ ಮುಖ್ಯ ಸಾಧನವಾಗಿದೆ ಆದರಿಂದ ಇದು ಶ್ರವಣದ ಒಂದಂಗವೆಂದೇ ಗ್ರಹಿಸಬಹುದಾಗಿದೆ. ಶ್ರವಣಕ್ಕೆ ಕರ್ಣೇಂದ್ರಿಯವು ಸಾಧನವಾಗಿದ್ದರೆ ವಾಚನಕ್ಕೆ ನಯನೇಂದ್ರಿಯವು ಸಾಧನವಾಗಿದೆ ಶ್ರವಣಶಕ್ತಿಯು ಇನ್ನೊಬ್ಬರು ಮಾತನಾಡಿದ್ದನ್ನು ಸರಿಯಾಗಿ ತಿಳಿದುಕೊಳ್ಳುವುದರಲ್ಲಿ ಸಾರ್ಥಕವಾಗಿದ್ದರೆ ವಾಚನವು ಇನ್ನೊಬ್ಬರು ಬರೆದುದನ್ನು ಸಮರ್ಪಕವಾಗಿ ತಿಳಿದುಕೊಳ್ಳುವುದರಲ್ಲಿ ಪೂರ್ಣತ್ವವನ್ನು ಹೊಂದುವುದು ಅದರಿಂದ ಶ್ರವಣದ ಸುಧಾರಿಸಿದ ಸ್ಥಿತಿಯೇ— ವಿಕಸಿತ ರೂಪವೇ— ವಾಚನವೆಂದು ಹೇಳಬಹುದು

ನಿವೇದನದಿಂದ ಆರಂಭವಾದ ಭಾಷಾಭ್ಯಾಸವು ಮಕ್ಕಳನ್ನು ಶ್ರವಣದ ಸೇತುವೆಯ ಮೇಲಿಂದ ಜ್ಞಾನಭಾಂಡಾರದ ಬಾಗಿಲಿಗೆ ಕರೆದು ತಂದು ನಿಲ್ಲಿಸುವುದು ಇನ್ನು ಜ್ಞಾನಭಾಂಡಾರದ ಬೀಗದ ಮುದ್ರೆಯನ್ನು ತೆಗೆಯಲಿಕ್ಕೆ ವಾಚನವು ಬೀಗದ ಕೈಯಂತಿರುವುದು ಇದನ್ನು ಸಹಜವಾಗಿ ಶಿಕ್ಷಕನು ಮಕ್ಕಳ ಸ್ವಾಧೀನ ಮಾಡಬೇಕು ಆಗ ಚತುರನಾದ ಶಿಕ್ಷಕನು ತನಗೆ ಸಾಧಿಸಿದ ಪದ್ಧತಿಯೊಂದನ್ನು ಅವಲಂಬಿಸುವನು ಇಂಥ ಪದ್ಧತಿಗಳಲ್ಲಿ (೧) ಮೂಲಾಕ್ಷರ ಪದ್ಧತಿ (೨) ವಾಕ್ಯಪದ್ಧತಿ (೩) ಮಿಶ್ರಪದ್ಧತಿಗಳೆಂದು ಮೂರು ವಿಧವಾಗಿವೆ

**(೧) ಮೂಲಾಕ್ಷರ ಪದ್ಧತಿ** — ಇದು ಮೊದಲಿನಿಂದಲೂ ಭಾರತದಲ್ಲಿ ಪ್ರಚಾರದಲ್ಲಿದ್ದ ಪದ್ಧತಿಯು ಇದರಲ್ಲಿ ಮೊದಲು ಮಗುವಿಗೆ ಅಕ್ಷರಗಳ ಕಲ್ಪನೆ ಮಾಡಿಕೊಡುವದಿರುತ್ತದೆ ಅದಕ್ಕಾಗಿ ಒಂದೇ ಆಕಾರದ ಅಕ್ಷರಗಳ ಗುಂಪುಗಳನ್ನು ಶಿಕ್ಷಕರು ನಿರ್ಮಿಸಿಕೊಳ್ಳುವರು— ಉದಾಹರಣೆಗೆಂದು ‘ ದ, ರ, ಈ, ಕ ’ ಒಂದು ಗುಂಪು,— ‘ ವ, ಥ, ಮ, ಪ, ಫ ’ ಇನ್ನೊಂದು ಗುಂಪು— ಹೀಗೆ ಗುಂಪುಗಳನ್ನು ಮಾಡಿಕೊಂಡು ಆ ಗುಂಪುಗಳಲ್ಲಿಯ ಅಕ್ಷರಗಳಿಂದಲೇ ಶಬ್ದಗಳನ್ನು— ಕರ, ಈರ ಇತ್ಯಾದಿ— ರಚಿಸಿಕೊಂಡು, ಅವುಗಳನ್ನು ಕರೀ ಹಲಿಗೆಯ ಮೇಲೆ ಬರೆದು, ಓದಿಸಿ ಮಕ್ಕಳಿಗೆ ಶಿಕ್ಷಕರು ಅಕ್ಷರಗಳ ಕಲ್ಪನೆಯನ್ನು ಮಾಡಿಕೊಡುವರು ಇದರಲ್ಲಿ ಶಬ್ದಗಳ

ರೂಪದಲ್ಲಿ ಶಿಕ್ಷಕರು ಮಕ್ಕಳಿಗೆ ಓದುವಿಕೆಯನ್ನು ಆರಂಭಿಸಿದಂತೆ ತೋರಿದರೂ ಅವರ ಒಲವೆಲ್ಲ ಮೂಲಾಕ್ಷರಗಳ ಜ್ಞಾನ ಮಾಡಿಕೊಡುವುದರ ಕಡೆಗೇನೇ ಇರುತ್ತದೆ ಅದಕ್ಕಾಗಿ ಶಿಕ್ಷಕರು ಕರೀ ಹಲಿಗೆಯ ಮೇಲೆ ಬರೆಯುವ ಶಬ್ದಗಳಲ್ಲಿಯ ಅಕ್ಷರಗಳನ್ನು ಬೇರೆ ಬೇರೆ ಬಣ್ಣದ ಖಡುವಿನಿಂದ ಬರೆದು, ಅಕ್ಷರಗಳ ಭಿನ್ನ ಭಿನ್ನತ್ವದ ಕಲ್ಪನೆಯು ಮಕ್ಕಳಿಗೆ ಆಗುವಂತೆಯೂ ಅವುಗಳ ಆಕಾರವು ಮಕ್ಕಳ ಸ್ಮೃತಿಯಲ್ಲಿ ಉಳಿದು, ಮುಂದೆ ಅವರು ಆ ಮೂಲಾಕ್ಷರಗಳನ್ನು ಗುರುತಿಸುವಂತೆಯೂ ಪ್ರಯತ್ನಿಸುತ್ತಾರೆ ಈ ಕ್ರಮದಿಂದ ಮೂಲಾಕ್ಷರಗಳನ್ನೆಲ್ಲ ಮಕ್ಕಳಿಗೆ ಕಲಿಸಲಾಗ ವದು ಆಮೇಲೆ ಮಕ್ಕಳ ಪುಸ್ತಕದ ವಾಚನಾರಂಭವಾಗುವುದು. ಈ ಪದ್ಧತಿಯಲ್ಲಿ ಮೂಲಾಕ್ಷರಗಳ ಕಲ್ಪನೆಯೇ ವಾಚನದ ಆರಂಭದ ಸಾಧನವಾಗಿರುವದರಿಂದ ಇದಕ್ಕೆ ಮೂಲಾಕ್ಷರ ಪದ್ಧತಿ ಎಂದು ಹೆಸರು

(೨) ವಾಕ್ಯಪದ್ಧತಿ — ಭಾರತೀಯ ಶಿಕ್ಷಣದಲ್ಲಿ ಇದೇ ಶತಮಾನದಲ್ಲಿ ನವ ಮನ್ವಂತರ ಆರಂಭವಾಯಿತು ಆಗ ಮಾನಸಶಾಸ್ತ್ರಕ್ಕೆ ಅನುಸರಿಸಿ ಮಕ್ಕಳ ಶಿಕ್ಷಣ ಸಾಗಬೇಕೆಂದು ನಿರ್ಧರಿಸಲಾಯಿತು ಆಗಲೇ ಭಾಷಾ ಶಿಕ್ಷಣದಲ್ಲಿ ವಾಚನದ ಪ್ರಾರಂಭವು ವಾಕ್ಯಪದ್ಧತಿಯನ್ನು ಅನುಸರಿಸಿತು ಮೊದಲಿನ ಮೂಲಾಕ್ಷರ ಪದ್ಧತಿಯು ಅಶಾಸ್ತ್ರೀಯವೆಂದು ಪರಿಗಣಿಸಲಾಯಿತು.

ಈ ವಾಕ್ಯಪದ್ಧತಿಯ ತಳಹದಿಯು ಮಕ್ಕಳ ನಿವೇದನ ಶಕ್ತಿಯೇ ಆಗಿದೆ ಶಾಲೆಗೆ ಬರುವಷ್ಟರಲ್ಲಿ ಮಕ್ಕಳು ಮಾತನಾಡಲಿಕ್ಕೆ ಕಲಿತಿರುವರು ಅಲ್ಪ ಸ್ವಲ್ಪ ಜ್ಞಾನವನ್ನು — ತಮ್ಮ ಸುತ್ತಲಿನ ಜಗತ್ತಿನ ವಿಷಯದಲ್ಲಿ— ಸಂಪಾದಿಸಿರುವರು ಅದನ್ನೆಲ್ಲ ಆಧರಿಸಿ ಶಿಕ್ಷಕರು ಅವರ ಕೂಡ ಮಾತನಾಡಬೇಕು ಚಿಕ್ಕ ಚಿಕ್ಕ ವಾಕ್ಯಗಳಿಂದ ಕೂಡಿದ ಕಥೆ ಹೇಳಬೇಕು, ಹೇಳಿಸಬೇಕು ಅವರು ಮನೆಯಲ್ಲಿ ಮಾತನಾಡುವುದೂ ಮೂಲಗಲ್ಲಿ ಭಾಷೆಯನ್ನು ಕಲಿತಿರುವುದೂ ವಾಕ್ಯರೂಪದಲ್ಲಿ ಅದರಿಂದ ಅದು ಅವರಿಗೆ ಸಹಜವಾಗಿ ಬಂದುಬಿಡುವುದು ಇದು ವಾಕ್ಯಪದ್ಧತಿಯಿಂದ ಓದು ಕಲಿಸುವುದರಲ್ಲಿ ಮೊದಲನೆಯ ಮೆಟ್ಟಲಾಗಿದೆ

ಮುಂದಿನ ಮೆಟ್ಟಲುಗಳಲ್ಲಿ ಮಕ್ಕಳಿಗೆ ಚಿತ್ರಗಳನ್ನು ತೋರಿಸಿ ಅದಕ್ಕೆ ಸಂಬಂಧಿಸಿದ ಒಂದೆರಡು ವಾಕ್ಯಗಳನ್ನು ಓದಲಿಕ್ಕೆ ಹೇಳುವುದು, ಓದಿಸುವುದು ಆ ವಾಕ್ಯಗಳು ಮಕ್ಕಳಿಗೆ ಮನದಟ್ಟಾಗಲು ಚಿತ್ರಗಳನ್ನು ತೆಗೆದಿಟ್ಟು ಅವೇ ವಾಕ್ಯಗಳನ್ನು ಓದಲಿಕ್ಕೆ ಹಚ್ಚುವುದು ಆನೇಲೆ ಆ ವಾಕ್ಯಗಳಲ್ಲಿಯ ಶಬ್ದಗಳನ್ನು ಗುರುತಿಸ ಹಚ್ಚುವುದು ಹೀಗೆ ಅವರು ಗುರುತಿಸುವಂಥ ಶಬ್ದಗಳಿಂದಲೇ ರಚಿಸಿದ ಪುಸ್ತಕದ ಮೊದಲನೆಯ ಪಾಠವನ್ನು ಓದಿಸಲಿಕ್ಕೆ ಆರಂಭಿಸುವುದು ಅವರು ಪೂರ್ವಜ್ಞಾನದಿಂದ ಅದನ್ನು ಸಹಜವಾಗಿ ಓದುವರು ಆಗ ಅವರಿಗೆ ಓದಲಿಕ್ಕೆ ಬಂದಿತೆಂದು ಹರ್ಷವಾಗುವುದು ಹೀಗೆ ವಾಚನವು ಮುಂದರಿದ ಮೇಲೆ ಅಕ್ಷರಜ್ಞಾನವು ಕ್ರಮಕ್ರಮದಿಂದ ಆಗುತ್ತ ಹೋಗುವುದು. ಇದು ಮಕ್ಕಳ ಮಾನಸಶಾಸ್ತ್ರಕ್ಕೆ, ಅನುಸರಿಸಿ ಸಾಗುವ ಶಿಕ್ಷಣ ಪದ್ಧತಿಯೆಂದು ಈಗ ಹೆಸರಾಗಿದೆ, ಬಳಿಕೆಯಲ್ಲಿಯೂ ಇದೆ

(೩) ಮಿಶ್ರಪದ್ಧತಿ — ಪ್ರಾಥಮಿಕ ಶಿಕ್ಷಣ ರಂಗದಲ್ಲಿ ನುರಿತ ಹಲವು ಜನ ಶಿಕ್ಷಕರು ಮೂಲಾಕ್ಷರ ಪದ್ಧತಿ ಹಾಗೂ ವಾಕ್ಯಪದ್ಧತಿಗಳೆರಡನ್ನೂ ಸಮನ್ವಯ ಮಾಡಿಕೊಂಡು ಮಕ್ಕಳಿಗೆ ಓದುಕಲಿಸುವ ರೂಢಿಯೂ ಇದೆ. ಇದನ್ನೇ ಮಿಶ್ರಪದ್ಧತಿಯೆಂದು ಇಲ್ಲಿ ಹೇಳಲಾಗಿದೆ

ಈ ಕ್ರಮದಲ್ಲಿ ಚಿತ್ರದ ಮೂಲಕ ವಾಕ್ಯಗಳ ಪರಿಚಯವನ್ನು ಮೊದಲು ಮಾಡಿಕೊಡಲಾಗುತ್ತದೆ ತರುವಾಯ ಆ ಪರಿಚಿತ ವಾಕ್ಯಗಳಲ್ಲಿಯ ಶಬ್ದಗಳನ್ನು ಕರೀ ಹಲಿಗೆಯ ಮೇಲ ಬರೆದು, ಎಲ್ಲ ಮಕ್ಕಳಿಂದ ಓದಿಸಲಾಗುವುದು ಹೀಗೆ ಎಲ್ಲ ಮೂಲಾಕ್ಷರಗಳು ಸಮಾವೇಶವಾಗುವಂಥ ಕೆಲವು ವಾಕ್ಯಗಳು ಹಾಗೂ ಅವುಗಳ ಶಬ್ದಗಳ ಪರಿಚಯವು ಮಕ್ಕಳಿಗೆ ಆಗುವುದು ಅದರೊಡನೆಯೇ ಪ್ರತಿಯೊಂದು ಪದದೊಳಗಿನ ಅಕ್ಷರಗಳ ಗುರುತನ್ನು ಅವರಿಗೆ ಮಾಡಿಕೊಡುತ್ತ ಹೋಗುತ್ತಾರೆ ಅದರಿಂದ ಮೂಲಾಕ್ಷರಗಳಿಂದಲೇ ರಚಿತವಾದ ಪುಸ್ತಕದ ಆರಂಭದ ಪಾಠಗಳನ್ನು ಮಕ್ಕಳು ಸಹಜವಾಗಿ ಓದುವಂತಾಗುವುದು ಈ ಪದ್ಧತಿಯಲ್ಲಿ ವಾಕ್ಯಪದ್ಧತಿಯ ಮೇಲೆ ಆಧರಿಸಿದ ಅಕ್ಷರ ಜ್ಞಾನವು ವಾಚನದ ಆರಂಭದ ಸಾಧನವಾಗಿದೆ

ಪ್ರಾಥಮಿಕ ಶಾಲೆಗಳಲ್ಲಿ ಓದುವದಕ್ಕೆ ಕಲಿಸುವಾಗ ಮೇಲೆ ವಿವರಿಸಿದ ಮೂರೂ ಪದ್ಧತಿಗಳು ರೂಢಿಯಲ್ಲಿವೆ ಈ ಯಾವ ಪದ್ಧತಿಯೂ ಸಂಪೂರ್ಣ

ಶುದ್ಧವಾಗಿದೆ-ಎಂದು ಹೇಳಲಿಕ್ಕೆ ಆಗದು ವಾಕ್ಯಪದ್ಧತಿಯು ಸರ್ವಶಿಕ್ಷಣ ತಜ್ಞರಿಗೆ ಮಾನ್ಯವಾಗಿದ್ದೂ ಪ್ರತ್ಯಕ್ಷ ಕಾರ್ಯಮಾಡುವ ಪ್ರಾಥಮಿಕ ಶಿಕ್ಷಕರಿಗೆ ಹಲವು ಕಡೆಗೆ ಒಗ್ಗದೆ ಹೋಗಿದೆ ಯಾಕಂದರೆ ಆರಂಭದಲ್ಲಿ, ಮಕ್ಕಳು ಈ ಪದ್ಧತಿಯಲ್ಲಿ ಓದಲಿಕ್ಕೆ ಕಲಿಯುವಾಗ ಬಹಳ ಉತ್ಸಾಹವನ್ನು ತೋರಿಸುವರು ಅವರಿಗೆ ಅದೊಂದು ಆಟವೆನಿಸಿ ಹೋಗುವುದು ಮನ-ರಂಜನೆಯೂ ಸಾಕಷ್ಟು ಆಗುವುದು ಆದರೆ ಮುಂದೆ ಈ ಉತ್ಸಾಹ ಉಳಿಯುವದಿಲ್ಲ ಯಾಕಂದರೆ ಈ ಶಿಕ್ಷಣವು ಮನರಂಜನೆಯ ಗುರಿಯನ್ನೇ ಸಾಧಿಸುವದಿರುವದಿಲ್ಲ ಅವರಿಗೆ ವರ್ಣಗಳ ನಿಶ್ಚಿತ ಜ್ಞಾನವಿಲ್ಲದೆ ಮೂರು ನಾಲ್ಕನೆಯ ತರಗತಿಗಳಿಗೆ ಬಂದರೂ ಕೂಡ ಬರವಣಿಗೆಯಲ್ಲಿ ಪ್ರಗತಿಯನ್ನು ಕಾಣುವದಿಲ್ಲ ಓದುವದರಲ್ಲಿಯೂ ಮುಗ್ಗರಿಸುವರು ಆದರೂ ಇದು ಮಕ್ಕಳ ಮಾನಸಶಾಸ್ತ್ರಕ್ಕೆ ಸಮ್ಮತವಾದ ಶಿಕ್ಷಣ ಪದ್ಧತಿ ಎನಿಸಿದೆ ತಜ್ಞರಿಗೆ ಮಾನ್ಯವಾಗಿದೆ.

ಇನ್ನು ಮೂಲಾಕ್ಷರ ಪದ್ಧತಿಯು ಆರಂಭದಲ್ಲಿಯೇ ಮಕ್ಕಳಿಗೆ ಬೇಸರವನ್ನು ಉಂಟುಮಾಡುವುದು ಆದರೆ ನಮ್ಮ ಭಾರತೀಯ ಭಾಷೆಗಳಲ್ಲಿ ಉಚ್ಚಾರಕ್ಕೆ ಅನುಸರಿಸಿಯೇ ಲಿಪಿಯು ಇರುವುದರಿಂದ ಮಕ್ಕಳಿಗೆ ಅಷ್ಟು ತೊಂದರೆ ಎನಿಸದು ಮಕ್ಕಳ ಸ್ವಾಭಾವಿಕ ಭಾಷಾ ಶಿಕ್ಷಣಕ್ಕೆ ಪ್ರತಿಕೂಲವಾದ ಪದ್ಧತಿಯಿದು ಆದರೂ ನಿಶ್ಚಿತ ಅಕ್ಷರಜ್ಞಾನ, ಶುದ್ಧ ಲೇಖನಗಳು ಯಶಸ್ವಿಯಾಗಿ ಇದರಿಂದ ರೂಪಿಸಲ್ಪಡುತ್ತವೆ

ಮಿಶ್ರ ಪದ್ಧತಿಯಲ್ಲಿ ಹಳೆ-ಹೊಸ ಮಾರ್ಗಗಳ ಸುಗುಣಗಳ ಸಮನ್ವಯವಿದೆಯಾದರೂ ಮೂಲಾಕ್ಷರಗಳೆಲ್ಲ ಸಮಾವೇಶವಾಗುವಂತೆ ಶಿಕ್ಷಕರು ವಾಕ್ಯಗಳನ್ನು ಆರಂಭದಲ್ಲಿ ರಚಿಸಿಕೊಳ್ಳಬೇಕಾದುದರಿಂದ ಅವುಗಳಲ್ಲಿ ತೀರ ಕೃತ್ರಿಮತೆಯುಂಟಾಗುವುದು.

ಶಿಕ್ಷಕರು ಯಾವ ಪದ್ಧತಿಯನ್ನೇ ಅನುಸರಿಸಲಿ ಮಕ್ಕಳಿಗೆ ಓದುವಿಕೆಯು ಬೇಸರದ ವಿಷಯವಾಗದಂತೆಯೂ ಆಡಾಡುತ್ತ ಮೂಲಾಕ್ಷರ ಜ್ಞಾನವನ್ನು ಹೊಂದಿ ಮುಂದರಿಯುವಂತೆಯೂ ನೋಡಿಕೊಳ್ಳಬೇಕು ಒತ್ತಾಯದಿಂದ ಯಾವುದನ್ನೂ ನಾವು ಮಕ್ಕಳ ಮೇಲೆ ಹೇರಿದಂತೆ ಆಗಬಾರದು. ಶಾಲಾಗೃಹವು ಒಂದು ಕ್ರೀಡಾಮಂದಿರವಾಗಿರಬೇಕು

ಲೇಖನ

ಲೇಖನವು ನಿವೇದನದ ಇನ್ನೊಂದು ರೂಪವು, ಕೃತ್ರಿಮ ರೂಪವು. ಆದರೂ ಇದೂ ಒಂದು ಮನೋಗತವನ್ನು ವ್ಯಕ್ತಪಡಿಸುವ ಸಾಧನವಾಗಿದೆ ಮನುಷ್ಯನ ವಿಚಾರ, ಭಾವಗಳು ಸ್ಪಷ್ಟ ಹಾಗೂ ಸರಳವಾಗಿದ್ದಷ್ಟು ಲೇಖನವು ಯಶಸ್ವಿಯಾಗುವುದು ಅಂದರೂ ಅದು ಭಾಷೆಯನ್ನೇ ಹೆಚ್ಚಾಗಿ ಅವಲಂಬಿಸಿದೆ ತನ್ನ ವಿಚಾರಗಳನ್ನು ಸರಳವೂ ಸುಸಂಬದ್ಧವೂ ಆಗಿ ಲೇಖನದಲ್ಲಿ ಮೂಡಿಸುವಷ್ಟು ಸಾಮರ್ಥ್ಯವು ಭಾಷಾ ಶಿಕ್ಷಣದಿಂದ ಒದ-ಗಬೇಕಾಗುತ್ತದೆ ಇದು ಆಯಾ ವ್ಯಕ್ತಿಯ ವಾಚನ, ಮನನ, ಶ್ರವಣ ಶಕ್ತಿ-ಗಳನ್ನು ಅವಲಂಬಿಸಿದೆ. ಲೇಖನ ಸಾಮರ್ಥ್ಯವನ್ನು ಪಡೆಯುವುದು ಭಾಷಾಭ್ಯಾಸದ ಕೊನೆಯ ಮೆಟ್ಟಲಾಗಿದೆ ಅದರಂತೆ ಭಾಷಾ ಶಿಕ್ಷಣದ ಸಾಧನ ಚತುಷ್ಟಯಗಳಲ್ಲೂ ಇದು ಕೊನೆಯದಾಗಿದೆ

ಮಿಶ್ರ ಪದ್ಧತಿಯಿಂದ ವಾಚನವನ್ನು ಕಲಿಸಲು ಆರಂಭಿಸುವಾಗ ಶಿಕ್ಷಕರು ಮೆಲ್ಲನೆ ಬರವಣಿಗೆಯನ್ನು ಪ್ರಾರಂಭಿಸಿ ಬಿಡುವದುಂಟು ಶಿಕ್ಷಕರು ಮಕ್ಕಳ ಪಾಟಿಗಳ ಮೇಲೆ ಸುಂದರವೂ ದೊಡ್ಡದೂ ಆದ ಅಕ್ಷರವನ್ನು ಬರೆದುಕೊಟ್ಟು, ಅದನ್ನು ತೀಡಲಿಕ್ಕೆ ಹಚ್ಚುವ ಪರಿಪಾಠವಿದೆ ಇದರಿಂದಲೇ ಲೇಖನ ಶಿಕ್ಷಣವು ಪ್ರಾಥಮಿಕ ಶಾಲೆಗಳಲ್ಲಿ ಆರಂಭವಾಗುವುದು ಈ ಸಂದರ್ಭದಲ್ಲಿ ಬರವಣಿಗೆಯ ಸಾಧನಗಳಲ್ಲಿ ಪೆನ್ಸಿಲ್ಲು ಮುಖ್ಯವಾದದ್ದು ಇದನ್ನು ಚೆನ್ನಾಗಿ ಹಿಡಿಯಲಿಕ್ಕೆ ಮೊದಲು ಕಲಿಸಬೇಕಾಗುವುದು ಅದ-ರಿಂದಲೇ ಮಕ್ಕಳ ಬೆರಳಿಗೆ ಯೋಗ್ಯ ರೂಢಿಯುಂಟಾಗುವುದು. ಅದರಂತೆ ಮುಂಗೈಯ ಹೊರಳುವಿಕೆ ಸರಿಯಾಗಿ ಆಗಬೇಕು ಕೂಡುವ ಪದ್ಧತಿಯ ಕಲ್ಪನೆಯನ್ನೂ ಅವರಿಗೆ ಮಾಡಿಕೊಡಬೇಕು

ಇದೆಲ್ಲ ಲೇಖನದ ಪೂರ್ವಸಿದ್ಧತೆಯಾಯಿತು ಮಕ್ಕಳ ಶಿಕ್ಷಕರನ್ನು ಅನುಕರಿಸುವುದರಿಂದ ಅವರು ಕರೀ ಹಲಿಗೆಯ ಮೇಲೆ ಮಾದರಿಯ ಅಕ್ಷರಗಳನ್ನು ಬರೆಯುವಾಗ ಸುಂದರವಾಗಿ ಬರೆಯಬೇಕು ಅಕ್ಷರಗಳ ಪ್ರಮಾಣಬದ್ಧತೆಯ ಕಲ್ಪನೆಯೂ ಮಕ್ಕಳಿಗೆ ಆಗುವಂತೆ ಮುಂದೆ ಯತ್ನಿಸಬೇಕು ಬರವಣಿಗೆಯೊಳಗಿನ ಸೌಂದರ್ಯ, ವೇಗಗಳು ಮಕ್ಕಳ ವಯಸ್ಸು ಹಾಗೂ ರೂಢಿಯನ್ನು ಅವಲಂಬಿಸಿವೆ ಸುಂದರವಾಗಿ ಬರೆದು ತೀರ ಮಂದಗತಿಯಲ್ಲಿ ಬರೆಯುವುದೂ ವೇಗ ಹೆಚ್ಚಿ ಕೆಟ್ಟ ರೀತಿಯಲ್ಲಿ ಬರೆಯುವುದೂ ವ್ಯವಹಾರ

ದಲ್ಲಿ ನಿರುಪಯುಕ್ತವಾದವುಗಳು, ತಾತ್ವಿಕವಾದವುಗಳು ಅದರಿಂದ ಒರವಣಿಗೆಯು ಸುಂದರವಿದ್ದು, ತಕ್ಕಷ್ಟು ವೇಗವನ್ನು ಹೊಂದಿರುವಂತೆ ಮಕ್ಕಳನ್ನು ಸಿದ್ಧಗೊಳಿಸಬೇಕಾಗುವುದು ಆದಕ್ಕಾಗಿ ಸುಂದರ ಅಕ್ಷರ ಒರೆಯುವ ವಿಷಯದಲ್ಲಿ ವಿದ್ಯಾರ್ಥಿಗಳಲ್ಲಿ ಸ್ಪರ್ಧೆಗಳನ್ನು ಆಗಾಗ ಶಿಕ್ಷಕರು ಏರ್ಪಡಿಸ ಬಹುದು

ಇದಲ್ಲ ಲೇಖನದ ಆರಂಭ ಹಾಗೂ ಬಾಹ್ಯ ವಿಷಯದ ಸ್ಥೂಲ ವಿವರಣ ವಾಯಿತು ಭಾವಕ್ಕೆ ತಕ್ಕ ಶಬ್ದಗಳನ್ನು ಪಡೆದು ಲೇಖನ ರೂಪುಗೊಳ್ಳು ವುದು ವಿಷಯದ ವಿವರಣಕ್ಕಾಗಿ ಉದಾಹರಣೆಗಳನ್ನೂ ಸೌಂದರ್ಯಕ್ಕಾಗಿ ಅಲಂಕಾರಗಳನ್ನೂ ಉಪಯೋಗಿಸುವುದು ಮುಂದಿನ ವಿಷಯವಾಗಿದೆ ಇದಕ್ಕಾಗಿ ತುಂಬಾ ಸಾಧನೆಯು ಬೇಕಾಗುವುದು. ಈ ಸಾಧನೆಯೇ ಭಾಷಾ ಶಿಕ್ಷಣದ ಹೃದಯವಾಗಿದೆ.

× × × ×

ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ (೧) ತನ್ನ ವಿಚಾರಗಳನ್ನು ಸ್ಪಷ್ಟ ಹಾಗೂ ಸರಳವಾಗಿ ಅನ್ಯರಿಗೆ ಮಾತಿನಿಂದ ತಿಳಿಸುವುದು (೨) ಇನ್ನೊಬ್ಬರ ವಿಚಾರಗಳನ್ನು ಮಾತಿನ ಮೂಲಕ ತಿಳಿದುಕೊಳ್ಳುವುದು. (೩) ಲೇಖನಗಳ ವಾಚನದಿಂದ ತಿಳಿದುಕೊಳ್ಳುವುದು (೪) ಲೇಖನದಿಂದ ಇನ್ನೊಬ್ಬರಿಗೆ ತಿಳಿಸುವುದು –ಇವು ನಾಲ್ಕು ಮುಖ್ಯವಾಗಿವೆ ಭಾಷಾಭ್ಯಾಸವನ್ನು ಬಿಟ್ಟು ಉಳಿದ ವಿಷಯಗಳ ಅಭ್ಯಾಸಕ್ಕೂ ಈ ಶಕ್ತಿಗಳ ಅವಶ್ಯಕತೆಯು ಶಿಕ್ಷಣದಲ್ಲಿ ಬಹಳಷ್ಟು ಇರುತ್ತದೆ ಅದರಿಂದ ಭಾಷೆಯೇ ಎಲ್ಲ ಶಿಕ್ಷಣದ ಮಾಧ್ಯಮ ವಾಗಿದೆ ಈ ಮಾಧ್ಯಮವು ಪ್ರಾಥಮಿಕ ಶಿಕ್ಷಣದಿಂದ ಮಾಧ್ಯಮಿಕ ಶಿಕ್ಷಣಕ್ಕೆ ಮಕ್ಕಳು ಮುಂದರಿದಂತೆ ಪ್ರೌಢವೂ ಗಂಭೀರವೂ ಆಗುತ್ತ ಹೋಗುವುದು. ಮೇಲೆ ವಿವರಿಸಿದ ಭಾಷಾ ಶಿಕ್ಷಣದ ಸಾಧನ ಚತುಷ್ಟಯಗಳ ಕ್ಷೇತ್ರವು ವಿದ್ಯಾಭ್ಯಾಸದ ಮೇಲ್ತರಗತಿಗಳಲ್ಲಿ ಹೋದಂತೆ ವಿಸ್ತಾರಗೊಳ್ಳುತ್ತ ಹೋಗುವುದು ಆದರೆ ಎಂಥ ಉಚ್ಚ ಮಟ್ಟದ ಶಿಕ್ಷಣ ಕ್ಷೇತ್ರದಲ್ಲಿ ಪ್ರವೇಶಿಸಿದರೂ ಸಹ ವಿದ್ಯಾರ್ಥಿಗಳಿಗೆ ಈ ಸಾಧನ ಚತುಷ್ಟಯಗಳಲ್ಲಿ ತರಬೇತಿಯಿಲ್ಲದೆ ನಡೆಯುವಂತಿಲ್ಲ ಅದರಿಂದ ಭಾಷಾಭ್ಯಾಸಕ್ಕೆ ಎಲ್ಲಿದೆಗೂ ಇವೇ ಮೂಲಭೂತ ಸಾಧನಗಳಾಗಿವೆ



# ೪. ಮನೋವಿಕಾಸ ಮತ್ತು ಅಭ್ಯಾಸಕ್ರಮ

ಮಕ್ಕಳ ಮನೋವಿಕಾಸಕ್ಕೆ ಅನುಸರಿಸಿ ಅಭ್ಯಾಸಕ್ರಮದ ರಚನೆಯನ್ನು ಮಾಡಬೇಕಾಗುತ್ತದೆ ಮನೋವಿಜ್ಞಾನಕ್ಕೂ ಶಿಕ್ಷಣಕ್ಕೂ ಬಹಳ ನಿಕಟವಾದ ಸಂಬಂಧವಿದೆ ಚಿಕ್ಕ ಚಿಕ್ಕ ಮಕ್ಕಳಿಗೆ ಅದ್ಭುತ ರಮ್ಯ ಕಲ್ಪನಾ ಸೃಷ್ಟಿಯಲ್ಲಿ ತಮ್ಮ ಮನಸ್ಸಿನ ಗರಿಗೆದರಿ ಹಾರಾಡುವ ಲವಲವಿಕೆ ಬಹಳವಿರುತ್ತದೆ ಮಕ್ಕಳ ಮನಸ್ಸೆಂದರೆ ಹಕ್ಕಿಗಳಂತೆ ಯಾವಾಗಲೂ ಕಲ್ಪನಾಲೋಕದಲ್ಲಿ ವಿಹರಿಸುವಂಥದು ಸುಮಾರು ಆರರಿಂದ ಒಂಭತ್ತು ವರ್ಷ ವಯಸ್ಸಿನ ಮಕ್ಕಳ ಒಂದು ಗುಂಪನ್ನು ನಾವು ಎತ್ತಿಕೊಂಡರೆ ಆರೇಳು ವರ್ಷ ವಯಸ್ಸಿನ ಮಕ್ಕಳು 'ಮಂಗ-ಮೊಸಳೆ', 'ದ್ರಾಕ್ಷಿ ಮತ್ತು ನರಿ', 'ಸಿಂಪಿಗ-ಮಂಗ' ಗಳ ಕತೆಗಳನ್ನು ಬಹು ಉತ್ಸುಕತೆಯಿಂದ ಕೇಳುವರು ಕತೆ ಕೇಳುವಾಗ ತಾವು ಸ್ವತಃ ಮಂಗ, ಮೊಸಳೆಗಳೆಂದೇ ಬಾವಿಸಿ ಕಲ್ಪನೆಯ ಕುದುರೆಯನ್ನು ಏರಿ ಸಾಗುವರು ಕತೆ ಮುಗಿದ ಮೇಲೆ ಹೊರಗ ಹೋದಾಗ ಗಿಡದ ಒಡದಲ್ಲಿ ಹೋಗಿ ಸರಿಯುತೆ ಮೇಲೆ ನೋಡಿ, ಬಾಯ್ದೆರೆದು ಜಿಗಿಯುವ ಮಕ್ಕಳನ್ನು ನಾವೆಷ್ಟು ಕಂಡಿಲ್ಲ? ಇವೇ ಮಕ್ಕಳು ಎಂಟು ಒಂಭತ್ತು ವರ್ಷದವರಾದಾಗ ರಾಮಾಯಣ ಮಹಾಬಾರತ ಕಥೆಗಳನ್ನು ಆಸ್ಥೆಯಿಂದ ಕೇಳುವರು. ಹನುಮ ಸಮುದ್ರ ಹಾರಿದ್ದು, ಕುಂಭಕರ್ಣನ ಮೂಗಿನಲ್ಲಿ ನೇರಿದ್ದು, ಹತ್ತು ತಲೆಯ ರಾವಣ ಈ ಎಲ್ಲ ಸಂಗತಿಗಳು ಅವರ ಮನಸ್ಸನ್ನು ಸೆಳೆಯುವವು ಅದರಂತೆ ಬಕಾಸುರನ ಕೊಲೆ, ಅರಗಿನ ಮನೆಗೆ ಕೊಳ್ಳಿ ಇಡುವುದು ಮೊದಲಾದ ಪ್ರಸಂಗಗಳಲ್ಲಿ ಅವರು ಸ್ವತಃ ಭಾಗವಹಿಸಿದಷ್ಟು ತನ್ಮಯರಾಗುವರು.

ಮಕ್ಕಳ ಈ ಮನೋವೃತ್ತಿಯನ್ನು ಅರಿತು, ನಾವು ಅವರಿಗೆ ವಾಚನ ಪುಸ್ತಕಗಳನ್ನು ಒದಗಿಸಬೇಕು ಅಂದರೆ ಅವರಲ್ಲಿ ವಾಚನಾಭಿರುಚಿಯು ಬೆಳೆಯುವುದು. ಇದನ್ನು ಉತ್ತರೋತ್ತರ ಬೆಳೆಯಿಸುತ್ತ ಹೋಗುವುದು ಭಾಷಾ ಶಿಕ್ಷಣದಲ್ಲಿ ಮುಂದಿನ ಹೆಜ್ಜೆಯಾಗಿದೆ. ಆರಂಭದಲ್ಲಿ ಶ್ರವಣದ ಮುಖಾಂತರ ಮಕ್ಕಳು ಕಥೆಗಳನ್ನು ಕೇಳಿ, ಆ ಕಲ್ಪನಾಲೋಕದಲ್ಲಿ ಪ್ರವೇಶಿ

ಸುತ್ತಾರೆ ಮುಂದೆ ಅವರಿಗೆ ಸ್ವತ ಓದಿ, ತಮ್ಮ ಪ್ರಯತ್ನದಿಂದ ಕಥಾ ಸೃಷ್ಟಿಯಲ್ಲಿ ಸಂಚರಿಸುವದಕ್ಕೆ ವಾಚನದಿಂದ ಸ್ವಾತಂತ್ರ್ಯ ಲಭಿಸುತ್ತದೆ ಆಗ ಶಿಕ್ಷಕರು ಅವರ ವಯೋಮಾನ, ಮನೋವಿಕಾಸಗಳನ್ನು ಗಮನಿಸಿ, ಅವರ ಕುತೂಹಲವನ್ನು ಪೂರೈಸುವ ಗ್ರಂಥಗಳನ್ನು ಓದಲು ಒದಗಿಸುತ್ತ ಹೋಗಬೇಕು ಅದರಿಂದ ಅವರ ವ್ಯಕ್ತಿತ್ವ ವಿಕಾಸಕ್ಕೆ ಪುಷ್ಟಿ ದೊರೆಯು ವುದು ಅಭಿಮನ್ಯುವಿನ ಶೌರ್ಯ, ಧರ್ಮರಾಜನ ಸತ್ಯಸಂಧತೆ, ಸೀತೆಯ ಪಾತಿವ್ರತ್ಯ, ಹನುಮಂತನ ಸಾಹಸ, ಪ್ರತಾಪಸಿಂಹನ ದೇಶಭಕ್ತಿಗಳು ಅವರ ಮನಸ್ಸನ್ನು ಹಿಡಿಯುವವು ಅವರ ಒಗ್ಗೆ ಮಕ್ಕಳಲ್ಲಿ ಆದರ ಹುಟ್ಟು ವುದು ಉತ್ತರ ಕುಮಾರನ ಹೇಡಿತನ, ದುರ್ಯೋಧನನ ಕಪಟ, ರಾವಣನ ದುರ್ವ್ಯಾಪಾರಗಳು ಅವರಿಗೆ ಬೇಸರವನ್ನುಂಟು ಮಾಡುವವು ಒಳ್ಳೆಯ ದನ್ನು ಪ್ರೀತಿಸುವುದು, ಕೆಡಕನ್ನು ಹೀಯಾಳಿಸುವುದು – ಇದೇ ವ್ಯಕ್ತಿತ್ವ ನಿರ್ಮಾಣದ ಹಾಗೂ ಸಹಜ ಪ್ರವೃತ್ತಿಗಳ ಉದಾತ್ತೀಕರಣದ ಮೂಲ ಮಂತ್ರವಾಗಿದೆ

ಇದನ್ನೆಲ್ಲ ಲಕ್ಷ್ಯದಲ್ಲಿಟ್ಟು, ಆರರಿಂದ ಒಂಭತ್ತು ವರ್ಷ ವಯಸ್ಸಿನ ಮಕ್ಕಳ ಬಾಷಾಶಿಕ್ಷಣದ ಅಬ್ಯಾಸಕ್ರಮದ ರೂಪರೇಷೆಯನ್ನು ಸ್ಥೂಲವಾಗಿ ಹೀಗೆ ಕೊಡಬಹುದು –

(ಅ) **ಮಾತುಗಾರಿಕೆ :–** ೧) ತೋರಿಸಿದ ಚಿತ್ರದ ಬಗ್ಗೆ ಕೇಳಿದ ಪ್ರಶ್ನೆಗಳಿಗೆ ಪೂರ್ಣ ವಾಕ್ಯಗಳಲ್ಲಿ ಉತ್ತರ ಹೇಳುವುದು ೨) ತಮ್ಮ ತಂದೆ, ತಾಯಿ, ಮನೆ, ಉದ್ಯೋಗಗಳ ಬಗ್ಗೆ ಪ್ರಶ್ನೆಗೆ ಸರಿಯಾಗಿ ಉತ್ತರಿಸುವುದು ೩) ನೋಡಿದ ಪ್ರಸಂಗವನ್ನು ಸ್ವಲ್ಪದರಲ್ಲಿ ವರ್ಣಿಸುವುದು ೪) ಚಿತ್ರಗಳ ಆಧಾರದಿಂದ ಕದೆ ರಚಿಸಿ ಹೇಳುವುದು ೫) ಕೇಳಿದ ಕಥೆಯನ್ನು ತುಸು ಅಭಿನಯಿಸಿ ಹೇಳುವುದು ೬) ಓದಿದ ಕಥೆಯನ್ನು ಸಂಗ್ರಹಿಸಿ ಹೇಳು ವುದು ೭) ತಾವು ಆಡಿದ ಆಟವನ್ನು ವರ್ಣಿಸುವುದು ೮) 'ಹಕ್ಕಿಯ ತರದಲಿ ಪಕ್ಕಗಳಿದ್ದರೆ' — ಇಂಥ ಕಾಲ್ಪನಿಕ ವಿಷಯಗಳ ಒಗ್ಗೆ ನಾಲ್ಕಾರು ಮಾತುಗಳಲ್ಲಿ ಭಾಷಣ ಮಾಡುವುದು

(ಆ) **ಓದುವಿಕೆ –** ೧) ಅಕ್ಷರ, ಶಬ್ದ, ವಾಕ್ಯಗಳನ್ನು ಗುರುತಿಸು ವುದು ೨) ಸುಲಭ ವಾಕ್ಯಗಳನ್ನು ಅರ್ಥ ತಿಳಿದುಕೊಂಡು ಓದುವುದು.

೩) ಸಂಭಾಷಣೆಯ ರೂಪದಲ್ಲಿರುವ ಸುಲಭ ಗದ್ಯವನ್ನು, ಧ್ವನಿಯನ್ನು ಬೇರೆ ಬೇರೆ ಮಾಡಿ ಓದುವುದು ೪) ಸುಲಭ ಕಥೆಗಳನ್ನು ಓದುವುದು ೫) ಓದಿದ ಕಥೆ, ಪಾಠಗಳನ್ನು ಸಂಗ್ರಹಿಸಿ, ಮೆಟ್ಟಿಲು ಮೆಟ್ಟಿಲುವಾಗಿ ವಿವರಿಸುವುದು ೬) ಪೂರ್ಣವಿರಾಮ, ಪ್ರಶ್ನೆ ಚಿನ್ಹ, ಉದ್ಗಾರಗಳನ್ನು ಗಮನಿಸಿ ಓದುವುದು

(೩) ಪಾಠಮಾಡುವಿಕೆ — (೧) ಚಿಕ್ಕ ಚಿಕ್ಕ ಶಿಶುಗೀತಗಳನ್ನು ಸಾಮೂಹಿಕವಾಗಿ ಅನ್ನುವುದು (೨) ಅಭಿನಯಪೂರ್ವಕವಾಗಿ ಹಾಡುಗಳನ್ನು ಅನ್ನುವುದು. (೩) ವಯಸ್ಸು ಹೆಚ್ಚಿದಂತೆ, ಕಲಿತ ಕವಿತೆಯನ್ನು ಓದಿ ಅದಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರ ಹೇಳುವದು (೪) ವ್ಯಕ್ತಿಗತವಾಗಿ ಭಾವ ವ್ಯಕ್ತವಾಗುವಂತೆ ಕವಿತೆ ಅನ್ನುವುದು.

ಈ ವಯೋಮಾನದ ವಿದ್ಯಾರ್ಥಿಗಳ ಗುಂಪಿನಲ್ಲಿ ಸಾಮಾನ್ಯವಾಗಿ ಪ್ರಾಥಮಿಕ ಶಾಲೆಗಳಲ್ಲಿಯ ಆರಂಭದ ನಾಲ್ಕು ವರ್ಗಗಳು ಸಮಾವೇಶವಾಗಬಲ್ಲವು.

× × × ×

ಪ್ರಾಥಮಿಕ ಶಾಲೆಯ ಮುಂದಿನ ಮೂರು ತರಗತಿಗಳಲ್ಲಿ ಮಕ್ಕಳ ಮನಸ್ಸು ಕಲ್ಪನಾ ಲೋಕದಿಂದ ಸತ್ಯ ಸೃಷ್ಟಿಯ ಕಡೆಗೆ ಹೊರಳುತ್ತ ಹೋಗುವುದು ಈ ವರ್ಗಗಳಿಗೆ ಬರುವ ವಿದ್ಯಾರ್ಥಿಗಳ ವಯಸ್ಸು ಸುಮಾರು ಒಂಭತ್ತರಿಂದ ಹದಿಮೂರರ ವರೆಗೆ ಇರುವುದು ಆಗ ಮಕ್ಕಳು ಆದರ್ಶದ ಬೆನ್ನು ಹತ್ತುವರು ಸಾಹಸ, ಧೈರ್ಯಪ್ರದರ್ಶನಗಳನ್ನೂ ಮೆಚ್ಚುವರು ಸ್ವತಂತ್ರವಾಗಿ ವಿಚಾರಿಸುವದಕ್ಕೆ ಆರಂಭಿಸುವರು ಯಾವ ಸಂಗತಿಯನ್ನಾದರೂ ಒಮ್ಮೆಲೇ ನಂಬದೆ, ಅದನ್ನು ಚಿಕಿತ್ಸಕ ಬುದ್ಧಿಯಿಂದ ನಿರೀಕ್ಷಿಸುವರು ಘಟನೆಗಳನ್ನು ಸಂಶಯದಿಂದ ಕಾಣಹತ್ತುವರು. ಆದರಲ್ಲಿಯೇ ಅವರ ವಿಚಾರಶಕ್ತಿಯ ಪ್ರಗತಿಯ ಆರಂಭದ ಹೆಜ್ಜೆಯಿರುವುದು

ಈ ಮನೋವೃತ್ತಿಯನ್ನು ಗಮನಿಸಿ ಭಾಷಾವಿಷಯದ ಶಿಕ್ಷಕರು ಸಾಹಿತ್ಯದ ಮೂಲಕ ಆದರ್ಶ ಚಿತ್ರಗಳನ್ನು ಅವರ ಮುಂದೆ ಇಡಬೇಕು.

ನೇರವಾಗಿ ಉಪದೇಶದಿಂದ ಸ್ವೀಕರಿಸದ ಸದ್ಗುಣಗಳನ್ನು ಕಥನಗಳಲ್ಲಿಯ ಪ್ರಸಂಗ, ಪಾತ್ರಗಳಿಂದ ವಿದ್ಯಾರ್ಥಿಗಳಲ್ಲಿ ನೆಲೆಯೂರುವಂತೆ ಮಾಡಲಿಕ್ಕೆ ಬರುತ್ತದೆ ಕಾರ್ಯ ಕಾರಣ ಸಂಬಂಧಗಳನ್ನು ಕಲಾತ್ಮಕವಾಗಿ ವಿವರಿಸಿ, ಸಾಹಿತ್ಯದ ರಸ ಸ್ವಾದದೊಡನೆ ಅವರ ವ್ಯಕ್ತಿತ್ವವನ್ನು ಉಜ್ವಲಗೊಳಿಸುವುದು ಸಾಧ್ಯವಿದೆ ಸಹೃದಯತಯ ಸಸಿಯನ್ನು ಅವರ ಹೃದಯದಲ್ಲಿ ನೆಡುವ ಕಾಲವೂ ಇದೇ ಆಗಿರುತ್ತದೆ

ಮಕ್ಕಳ ಮನಸ್ಸಿನ ಸ್ಥಿತಿ ಹಾಗೂ ಅದನ್ನು ಅನುಕೂಲಗೊಳಿಸಿಕೊಂಡು, ನಾವು ಸಾಧಿಸಬೇಕಾದ ಭಾಷಾಶಿಕ್ಷಣದ ಗುರಿಯನ್ನು ಲಕ್ಷ್ಯದಲ್ಲಿಟ್ಟು ಐದು, ಆರು, ಮತ್ತು ಏಳನೆಯ ತರಗತಿಗಳಲ್ಲಿ ಭಾಷಾಭ್ಯಾಸ ಕ್ರಮವನ್ನು ನಿಯೋಜಿಸ ಬೇಕಾಗುವುದು

(ಅ) **ಮಾತುಗಾರಿಕೆ** — (೧) ಒಂದು ಪ್ರಸಂಗವನ್ನು ವಿವಿಧ ಭೂಮಿಕೆಯ ಮೇಲಿಂದ ವಿವರಿಸಿ ಹೇಳುವುದು (೨) ಒಂದು ಪಾಠ, ಇಲ್ಲವೆ ಒಂದು ಚರಿತ್ರ ಅಥವಾ ಚಿತ್ರದ ಬಗ್ಗೆ ಉಚಿತ ಪ್ರಶ್ನೆಗಳನ್ನು ಕೇಳುವುದು. (೩) ತಾನು ಓದಿಕೊಂಡ ಕಥೆ ಇಲ್ಲವೆ ಸಂಗತಿಯನ್ನು ಇನ್ನೊಬ್ಬರಿಗೆ ತಿಳಿಯುವಂತೆ ಹೃತ್ಪೂರ್ವಕವಾಗಿ ವಿವರಿಸುವುದು (೪) ಯಾವುದಾದರೊಂದು ಸಂಗತಿಯ ವಿಷಯದಲ್ಲಿ ಸಂಭಾಷಿಸುವುದು, ಚರ್ಚಿಸುವುದು (೫) ಚಿಕ್ಕ ಚಿಕ್ಕ ಭಾಷಣ ಕೊಡುವುದು (೬) ಇನ್ನೊಬ್ಬರ ಭಾಷಣವನ್ನು ಲಕ್ಷ್ಯಗೊಟ್ಟು ಕೇಳಿ, ಅದರಲ್ಲಿಯ ಮುಖ್ಯ ಮೆಟ್ಟಲುಗಳನ್ನು ಗುರುತಿಸುವುದು ಆ ಮೆಟ್ಟಲುಗಳ ಆಧಾರದಿಂದ ಪೂರ್ಣ ಭಾಷಣವನ್ನು ಸಂಗ್ರಹ ರೂಪದಲ್ಲಿ ತಿರುಗಿ ನಿವೇದಿಸುವುದು

(ಆ) **ಓದುವಿಕೆ** — (೧) ಸುಲಭವಾದ ಗದ್ಯವಿಭಾಗವನ್ನು ಒಳ್ಳೆಯ ರೀತಿಯಿಂದ ಓದುವುದು ಇಲ್ಲಿ ಒಳ್ಳೆಯ ರೀತಿಯೆಂದರೆ ತಾನು ತಿಳಿದುಕೊಂಡು, ಇನ್ನೊಬ್ಬರಿಗೂ ತಿಳಿಯುವಂತೆ, ಅಸ್ಖಲಿತವಾಗಿ ಓದುವುದು ಉಚ್ಚಾರವೂ ಶುದ್ಧ ಹಾಗೂ ಸ್ಪಷ್ಟವಾಗಿರಬೇಕು (೨) ಆದರಂತೆ ಸಂಭಾಷಣೆ, ಏಕಾಂಕ ನಾಟಕ, ನಾಟಕದ ಭಾಗಗಳನ್ನು ಭಾವಕ್ಕೆ ತಕ್ಕಂತೆ ಧ್ವನಿಯನ್ನು ಏರಿಳಿಸುತ್ತ ಓದುವುದು (೩) ಗದ್ಯವಿಭಾಗವನ್ನು ಮೌನವಾಗಿ

ಓದಿಕೊಂಡು ಸಂಗ್ರಹರೂಪದಲ್ಲಿ ಮೂಲ ವಿಚಾರಕ್ರಮವನ್ನು ಬಿಡದೆ ಹೇಳುವುದು (೪) ಸಂದರ್ಭದೊಡನೆ ವಾಕ್ಯಗಳನ್ನು ಸ್ಪಷ್ಟೀಕರಿಸುವುದು (೫) ಲೇಖನಗಳಲ್ಲಿಯ ಮೆಟ್ಟಿಲುಗಳನ್ನೂ ಪರಿಚ್ಛೇದಗಳ ಸುಸಂಬದ್ಧತೆಯನ್ನೂ ಕಂಡುಕೊಳ್ಳುವುದು (೬) ತಾನು ಮೆಚ್ಚಿದ ಗದ್ಯದ ವಿಷಯದಲ್ಲಿ ಕಾರಣ ಕೊಟ್ಟು ತನ್ನ ಮೆಚ್ಚಿಗೆಯನ್ನು ಸ್ಪಷ್ಟಪಡಿಸುವುದು

(ಇ) ಪಾರಮಾಡುನಿಕೆ — (೧) ವಿದ್ಯಾರ್ಥಿಯು ನೂರಿನ್ನೂರು ಪುಟಗಳಷ್ಟು ಗದ್ಯವನ್ನು ಸೂಕ್ಷ್ಮವಾಗಿ ಅಭ್ಯಸಿಸುವಂತೆ ನೂರಿನ್ನೂರು ಸಾಲುಗಳಷ್ಟು ಕವಿತೆಯನ್ನು ಪಾರ ಮಾಡಬೇಕು (೨) ಪಾರಮಾಡಿದ ಕಾವ್ಯವನ್ನು ಭಾವವ್ಯಕ್ತವಾಗುವಂತೆ ಅಂದು ತೋರಿಸುವುದು (೩) ಕೆಲವು ಕವಿತೆಗಳನ್ನು ತಾಳ, ಲಯಗಳೊಂದಿಗೆ ಭಾವವ್ಯಕ್ತಗೊಳ್ಳುವಂತೆ ನೋಡಿ ಅನ್ನುವದು (೪) ಭಾವಗೀತೆಗಳ ರಸವನ್ನು ಸವಿಯುವ ಶಕ್ತಿಯನ್ನು ಸಂಪಾದಿಸುವುದು (೫) ಪ್ರಾಚೀನ ಕವಿತೆಗಳ ಪದಚ್ಛೇದ ಮಾಡಿ ಅನ್ನುವುದು ಅನ್ವಯವನ್ನು ಹೊಂದಿಸುವುದು

(ಈ) ಸಾಹಿತ್ಯಾಭ್ಯಾಸ – ೧) ಮಾತೃಭಾಷೆಯ ಪ್ರಾಚೀನ ಕವಿ ಹಾಗೂ ಅವರ ಕೃತಿಗಳ ಹೆಸರುಗಳು ಗೊತ್ತಿರಬೇಕು. ೨) ಮುಖ್ಯ ಕೃತಿಗಳ ವಿಷಯದ ಕಲ್ಪನೆ ಇರಬೇಕು ೩) ಆಧುನಿಕ ಪ್ರಸಿದ್ಧ ಲೇಖಕರ ಪರಿಚಯ ೪) ಮಾತೃಭಾಷೆಯಲ್ಲಿಯ ಆಧುನಿಕ ಸಾಹಿತ್ಯದೊಳಗಿನ ಶ್ರೇಷ್ಠ ಗ್ರಂಥಗಳ ಪರಿಚಯ ೫) ತಮಗೆ ಉಪಯುಕ್ತವೆನಿಸುವ ಮಾಸ ಪತ್ರಿಕೆಗಳು ೬) ತಮಗೆ ಮೆಚ್ಚಿಗೆಯಾದ ಕವಿತೆ, ನಗೆಹನಿ, ಅಮೃತ ವಚನಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳುವುದು ೭) ಅಂದವುಗಳನ್ನು ತಮ್ಮ ಬರಹಗಳಲ್ಲಿ ಮಾತುಗಳಲ್ಲಿ ಉಪಯೋಗಿಸುವ ಶಕ್ತಿಯನ್ನು ಸಂಪಾದಿಸುವುದು

(ಉ) ಭಾಷಾ ಶಾಸ್ತ್ರದ ಅಭ್ಯಾಸ – ೧) ಅನೇಕಾರ್ಥದ ಶಬ್ದಗಳನ್ನು ವಿವಿಧ ಅರ್ಥಗಳಲ್ಲಿ ವಾಕ್ಯಗಳಲ್ಲಿ ಪ್ರಯೋಗಿಸುವುದು ೨) ಅಮೃತ ವಾಕ್ಯದ ಅರ್ಥ ಸ್ಪಷ್ಟವಾಗುವಂತೆ ವಿಸ್ತರಿಸುವುದು ೩) ವಿರೋಧ ಅರ್ಥವುಳ್ಳ ಪದಗಳನ್ನು ಕಂಡು ಹಿಡಿಯುವುದು ೪) ಅಪೂರ್ಣ

ವಾಕ್ಯಗಳನ್ನು ಪೂರ್ಣಗೊಳಿಸುವುದು ೫) ವಾಕ್ಯದೊಳಗಿನ ಪದಗಳ ಪರಸ್ಪರ ಸಂಬಂಧವನ್ನುಗುರುತಿಸುವುದು ೬) ಹಲವು ಪದಗಳ ಸಮೂಹದ ಅರ್ಥವನ್ನು ಒಂದೇ ಪದದಿಂದ ಸೂಚಿಸುವುದು ೭) ಮೇಳ-ನುಡಿ, ಜಾಣ್-ನುಡಿಗಳ ಉಪಯೋಗ ೮) ತಮ್ಮ ಬಳಕೆಯಲ್ಲಿ ಇರುವ ಕವಿತೆಗಳ ಲಕ್ಷಣವನ್ನು ಅಭ್ಯಸಿಸುವದು

× × × ×

ಭಾಷಾಭ್ಯಾಸದ ಅಭ್ಯಾಸದಲ್ಲಿ ಇನ್ನು ಮುಂದಿನ ವಿದ್ಯಾರ್ಥಿಗಳ ಸಮೂಹದಲ್ಲಿ ಹದಿಮೂರರಿಂದ ಹದಿನೇಳು ವಯಸ್ಸಿನವರು ಸೇರುತ್ತಾರೆ ಇವರು ಮಾಧ್ಯಮಿಕ ಶಾಲೆಯ ಕೊನೆಯ ನಾಲ್ಕು ವರ್ಗಗಳಲ್ಲಿ ಓದುತ್ತಿರುತ್ತಾರೆ ಮುಂದೆ ಉಚ್ಚ ಶಿಕ್ಷಣಕ್ಕೆಂದು ಇವರಲ್ಲಿ ಕೆಲವರು ಕಾಲೇಜುಗಳನ್ನು ಪ್ರವೇಶಿಸುವವರಿರುವರು ಇಂಥ ಯುವಕರ ಮನಸ್ಸುಹೆಚ್ಚುವಿಚಾರಶೀಲವೂ ಚಿಕಿತ್ಸಕ ಬುದ್ಧಿಯುಳ್ಳುದೂ ಆಗಿರುತ್ತದ ಅದರಿಂದ ಇವರಿಗೆ ಮಾಡಿಸುವ ಭಾಷಾಭ್ಯಾಸವು ವಿವೇಚನಾತ್ಮಕವಾಗಿರಬೇಕಾಗುತ್ತದೆ, ವಿಮರ್ಶೆಯನ್ನು ಒಳಗೊಂಡುದೂ ಇರಬೇಕಾಗುತ್ತದೆ. ಅವರು ಓದುವ ಗದ್ಯ ಪಾಠಗಳಲ್ಲಿ ಲೇಖಕರು ಮಂಡಿಸಿರುವ ವಿಚಾರಗಳು ಹೇಗೆ ತರ್ಕಶುದ್ಧವಾಗಿವೆ ? ವಿಚಾರಗಳ ವಿಕಾಸ ಹೇಗೆ ಆಗಿದೆ ? ಕಾರಣಗಳನ್ನು ಕೊಟ್ಟು ಸಿದ್ಧಾಂತಗಳನ್ನು ಹೇಗೆ ಪ್ರತಿಪಾದಿಸಿದ್ದಾರೆ ? — ಇವೆಲ್ಲವುಗಳ ಕಡೆಗೆ ವಿದ್ಯಾರ್ಥಿಗಳ ಮನಸ್ಸನ್ನು ಶಿಕ್ಷಕರು ಸೆಳೆಯಬೇಕಾಗುತ್ತದೆ. ಅದರಂತೆ ಭಾವಪ್ರಧಾನವಾದ ಲಲಿತ ವಾಙ್ಮಯ ಪಾಠಗಳಲ್ಲಿ ಕವಿಯ ಭಾವಸೃಷ್ಟಿ, ಭಾಷೆಯ ಸೂಚಕತೆ, ವ್ಯಂಜಕತೆ, ರಚನೆಯ ಕಲೆ ಇತ್ಯಾದಿಗಳ ಕಡೆಗೆ ಅವರ ಗಮನವನ್ನು ಆಕರ್ಷಿಸಬೇಕು

ಇವುಗಳನ್ನೆಲ್ಲ ಸಾಧಿಸಲಿಕ್ಕೆ ವಿದ್ಯಾರ್ಥಿಗಳಲ್ಲಿ ಭಾಷೆಯ ಆಳವಾದ ಜ್ಞಾನದ ಅವಶ್ಯಕತೆಯಿದೆ ಅದಕ್ಕಾಗಿ ವ್ಯಾಕರಣ, ಛಂದಸ್ಸು, ಶೈಲಿ, ವ್ಯುತ್ಪತ್ತಿಶಾಸ್ತ್ರ, ಅಲಂಕಾರಗಳ ಅಭ್ಯಾಸ ಸ್ಥೂಲವಾಗಿಯಾದರೂ ಆಗಬೇಕು ಸಾಹಿತ್ಯದ ವಿವಿಧಾಂಗಗಳ ಸೂಕ್ಷ್ಮ ಪರಿಚಯ, ಸ್ಥೂಲ ಕಲಾತಂತ್ರಗಳ ಜ್ಞಾನವನ್ನು ಅವರಿಗ ಮಾಡಿಕೊಡಬೇಕು. ಯಾಕಂದರೆ ಈ ವಯಸ್ಸಿನಲ್ಲಿ

ಮಕ್ಕಳ ವ್ಯಕ್ತಿತ್ವವು ಬಹು ಭರದಿಂದ ರೂಪುಗೊಳ್ಳುತ್ತಿರುತ್ತದೆ ನಿರ್ಮಾಣ ಶಕ್ತಿ ಕುದುರುತ್ತದೆ ಇದರಿಂದ ಅವರು ತಮ್ಮ ವಿಚಾರಗಳನ್ನು ಕಲ್ಪನೆಗಳನ್ನು ಮಂಡಿಸಲಿಕ್ಕೆ ಹಾತೊರೆಯುತ್ತಿರುತ್ತಾರೆ ಆಗ ಆರಂಭದಲ್ಲಿ ಅನುಕರಣಗಳ ರೂಪದಲ್ಲಿ ಹೆಜ್ಜೆ ಇಡುತ್ತಿರುತ್ತದೆ ಇದಕ್ಕೊಂದು ಅವಕಾಶ ಕಲ್ಪಿಸಿಕೊಟ್ಟು, ಭಾಷಾವಿಷಯದ ಶಿಕ್ಷಕರು, ವಿದ್ಯಾರ್ಥಿಗಳು ಲೇಖನಶಕ್ತಿಯನ್ನು ಕುದುಸಿರಿಕೊಳ್ಳಲಿಕ್ಕೆ ಆಸ್ಪದ ಒದಗಿಸಬೇಕು ತಾವು ಅದರಲ್ಲಿ ಮಾರ್ಗದರ್ಶಕರಾಗಬೇಕು

ಭಾಷಾ ಶಿಕ್ಷಣದ ಮುಖ್ಯ ಗುರಿಯು ವಿದ್ಯಾರ್ಥಿಗಳು ಮುಂದೆ ಸ್ವತಂತ್ರ ರೀತಿಯಿಂದ ಸಾಹಿತ್ಯವನ್ನು ಓದಿ ತಿಳಿಯುವ ಯೋಗ್ಯತೆಯನ್ನಂತೂ ಹೊಂದಲೇಬೇಕು ಲಲಿತ ಸಾಹಿತ್ಯದ ರಸಾಸ್ವಾದಮಾಡುವ ಶಕ್ತಿಯೂ ಅವರಿಗೆ ಈ ಅಭ್ಯಾಸವು ಒದಗಿಸಿಕೊಡಬೇಕು ಮಾತೃಭಾಷೆಯ ಬಗ್ಗೆ ಆದರ ಅಭಿಮಾನಗಳನ್ನು ಹುಟ್ಟಿಸಬೇಕು ಅದರೊಡನೆ ಸ್ವತಂತ್ರ ವಿಚಾರ ಶಕ್ತಿಯನ್ನುಂಟುಮಾಡಿ ಆತ್ಮಾವಿಷ್ಕಾರಕ್ಕೆ ಆಸ್ಪದ ಮಾಡಿಕೊಡಬೇಕು ಶೋಕವಿಲ್ಲದ ತಾರುಣ್ಯದ ಭಾವಾವೇಶಕ್ಕೆ ಒಂದು ಸಂಯಮದ, ವಿಚಾರದ ಕಡಿವಾಣ ಹಾಕಿ, ಯೋಗ್ಯ ದಿಸೆಯಲ್ಲಿ ಅವರ ಶಕ್ತಿಯು ಹರಿಯುವಂತೆ ಭಾಷಾಭ್ಯಾಸವು ಆತ್ಮವಿಮರ್ಶೆಯನ್ನು ಒದಗಿಸಬೇಕು. ಈ ಸಾಮರ್ಥ್ಯ ಆಗಲೇ ಕಂಡು ಬರದಿದ್ದರೂ ಮುಂದಿನ ಜೀವನದಲ್ಲಿ ಅವರು ರೂಪಿಸಿಕೊಳ್ಳುವಂತೆ ಆಗ ಸಮ್ಯಕ್ ವ್ಯಾಯಾಮ ನಡೆಯಬೇಕು ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೀಗೆ ಅಭ್ಯಾಸಕ್ರಮವನ್ನು ರೂಪಿಸಬಹುದು –

(ಅ) ಮಾತುಗಾರಿಕೆ — (೧) ಓದಿದ ಕಥೆ ಕಾದಂಬರಿಗಳ ಸಾರಾಂಶ ಹೇಳಲಿಕ್ಕೆ ಬರಬೇಕು (೨) ನೋಡಿದ ಚಲಚಿತ್ರದ ಕಥಾನಕವನ್ನು ರಸವತ್ತಾಗಿ ಹೇಳಬೇಕು (೩) ಕಥೆ, ನಾಟಕ, ಚಲಚಿತ್ರ ಮೊದಲಾದವುಗಳಲ್ಲಿಯ ಲೇಖಕರ ದೃಷ್ಟಿಕೋಣವನ್ನು ವಿವರಿಸಿ ಹೇಳಲು ಸಮರ್ಥರಾಗಬೇಕು (೪) ಅದರ ಮೇಲೆ ತಮ್ಮ ಅಭಿಪ್ರಾಯವನ್ನು ಪ್ರಕಟಿಸಲು ಶಕ್ತರಾಗಬೇಕು (೫) ಒಂದು ವಿಷಯದ ಮೇಲೆ ತಮ್ಮ ಮತವನ್ನು ಪ್ರತಿಪಾದಿಸಿ ಏಳೆಂಟು ನಿಮಿಷ ಮಾತನಾಡಲು ಬರಬೇಕು. ಇನ್ನೊಬ್ಬರ

ವಿಚಾರವನ್ನು ಸಯುಕ್ತಿಕವಾಗಿ ಖಂಡಿಸಲಿಕ್ಕೂ ಬರಬೇಕು (೬) ಒಂದು ವಿಷಯವನ್ನು ಕುರಿತು ಒಬ್ಬರು ಮಾತನಾಡುತ್ತಿರುವಾಗ ಅವರು ಬಿಟ್ಟ ಮುದ್ದೆಗಳನ್ನು ಎತ್ತಿಕೊಂಡು ತಾನು ವಿಷಯವನ್ನು ವಿವರಿಸುವುದು (೭) ಭಾವನಾತ್ಮಕ ಪ್ರಸಂಗವನ್ನು ಭಾವಪೂರ್ಣವಾಗಿ ವರ್ಣಿಸುವುದು. ಅದರಲ್ಲಿ ಹಾವ-ಭಾವ ವ್ಯಕ್ತಪಡಿಸುವುದು (೮) ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಹೇಳುವದು, ಅದರಂತೆ ಸಮರ್ಪಕ ಪ್ರಶ್ನೆಗಳನ್ನು ಕೇಳುವುದು (೯) ಒಂದೇ ಸಂಗತಿಯನ್ನು ವಿವಿಧ ರೂಪಗಳಲ್ಲಿ—ಕಥೆ, ಸಂಭಾಷಣ, ನಿಬಂಧ—ವಿವರಿಸುವುದು (೧೦) ವ್ಯಾಖ್ಯಾನವನ್ನು ಕೇಳ ಕೇಳುತ್ತ ಅದರ ಮುದ್ದೆ ಸಹ ಸಂಗ್ರಹಿಸುವುದು

(ಆ) ಓದುವಿಕೆ — (೧) ಲೇಖನದ ವಿಷಯವನ್ನು ಪ್ರತಿಪಾದಿಸಲಿಕ್ಕೆ ಲೇಖಕರು ಉಪಯೋಗಿಸಿದ ಸಾಧಕ ಬಾಧಕ ಸಂಗತಿಗಳನ್ನು ಕಂಡು ಹಿಡಿಯುವುದು (೨) ಅವುಗಳನ್ನು ತಿಳಿದುಕೊಂಡು ತನ್ನ ದೃಷ್ಟಿಕೋಣವನ್ನು ಮಂಡಿಸುವುದು (೩) ಒಟ್ಟು ಲೇಖದಲ್ಲಿರುವ ಲೇಖಕನ ಅಭಿಪ್ರಾಯ, ಅವನ ದೃಷ್ಟಿಕೋಣಗಳನ್ನು ಸಮಗ್ರವಾಗಿ ತಿಳಿದುಕೊಳ್ಳುವುದು (೪) ಪ್ರತಿಯೊಂದು ವಾಕ್ಯವೃಂದಕ್ಕೊಂದು ತಲೆಬರಹ ಕೊಡುವುದು (೫) ಕಥೆ, ನಾಟಕ, ಕಾದಂಬರಿಗಳಲ್ಲಿಯ ಪಾತ್ರಗಳ ಪರಿಚಯ ಮಾಡಿಕೊಡಲಿಕ್ಕೆ ಸಮರ್ಥರಾಗಬೇಕು (೬) ಅಂಥ ಪಾತ್ರ ಸೃಷ್ಟಿಗೆ ಇರುವ ಮೂಲ ಕಾರಣ, ಅವುಗಳ ಪರಿಣಾಮಗಳನ್ನು ಸ್ಥೂಲವಾಗಿ ಕಂಡುಕೊಳ್ಳುವುದು (೭) ಗದ್ಯವನ್ನು ಪರಿಣಾಮಕಾರಿಯಾಗಿ ಓದುವುದು (೮) ಪದ್ಯಗಳ ರಸಗ್ರಹಣ ಮಾಡುವುದು (೯) ತಾನು ಈಗ ಅಭ್ಯಸಿಸುತ್ತಿರುವ ವಿಷಯಕ್ಕೆ ಸಾಧಕ ಬಾಧಕ ಸಂಗತಿಗಳನ್ನು ತನ್ನ ಪೂರ್ವಜ್ಞಾನದಿಂದ ಎತ್ತಿ ಹೇಳುವುದು ಅವುಗಳನ್ನು ತಾನು ಎಲ್ಲಿ ಓದಿದ್ದು ಎಂಬುದನ್ನು ಸೂಚಿಸುವುದು (೧೦)ತಾನು ಓದಿದ ಗದ್ಯಪದ್ಯಗಳ ಗುಣಾವಗುಣಗಳನ್ನು ಮೆಚ್ಚುಗೆಯನ್ನೂ ಮೆಚ್ಚದಿರುವದನ್ನೂ ಸಕಾರಣವಾಗಿ ವಿವೇಚಿಸುವುದು (೧೧) ಗದ್ಯವನ್ನು ಮುಖ್ಯ ವಿಚಾರಗಳನ್ನು ಬಿಡದಂತೆ ಸಂಗ್ರಹಿಸುವುದು (೧೨) ಪದ್ಯಗಳ ಸರಳಾನುವಾದ ಬರೆಯುವುದು

(ಇ) ಪಾಠ ಮಾಡುವಿಕೆ:— (೧) ಒಳ್ಳೆಯ ಭಾವಗೀತೆಗಳನ್ನು ಅವುಗಳ ಭಾವ ಸ್ಪಷ್ಟವಾಗುವಂತೆ ಪಾಠಮಾಡಿ ಅನ್ನುವುದು (೨) ಮಾದರಿಯ ಗದ್ಯದ ವಿಭಾಗಗಳನ್ನು ಪಾಠಮಾಡಿ ಇಟ್ಟುಕೊಳ್ಳುವುದು ಇಂಥ ಪಾಠಮಾಡಿದ ಪದ್ಯ–ಗದ್ಯಗಳು ಪ್ರತಿಯೊಬ್ಬ ವಿದ್ಯಾರ್ಥಿಗೆ ಇಪ್ಪತ್ತರಷ್ಟಾದರೂ ಬರಬೇಕು (೩) ಏಕಪಾತ್ರಾಭಿನಯದ ಭಾಷಣ ಪಾಠ ಮಾಡುವುದು (೪) ಅದರಂತೆ ಏಕಾಂಕ ನಾಟಕಗಳಲ್ಲಿ ತನಗ ವಹಿಸಿದ ಪಾತ್ರದ ಸಂಭಾಷಣೆ ಪಾಠಮಾಡುವುದು (೫) ತನ್ನ ಭಾಷಣ, ಲೇಖನಗಳಿಗೆ, ಸೌಂದರ್ಯ, ಪ್ರಬುದ್ಧತೆ, ಆಧಾರ ಪೂರ್ಣತೆಗಳು ಬರುವಂತೆ ಶಾಸ್ತ್ರಗಳ ಶ್ಲೋಕ, ಪ್ರಸಿದ್ಧ ಲೇಖಕರ ಉಕ್ತಿ, ನಾಣ್ಣುಡಿಗಳನ್ನು ಪಾಠ ಮಾಡಿ ಇಟ್ಟುಕೊಂಡು, ತಕ್ಕ ಸಂದರ್ಭದಲ್ಲಿ ಉಪಯೋಗಿಸುವ ಪಾತ್ರತೆಯನ್ನು ಸಂಪಾದಿಸುವುದು.

(ಈ) ಸಾಹಿತ್ಯಾಭ್ಯಾಸ :— (೧) ಮಾತೃಭಾಷೆಯ ಪ್ರಾಚೀನ ಸಾಹಿತ್ಯದ ಸ್ಥೂಲ ಕಲ್ಪನೆ (೨) ಈಗಿನ ಸಾಹಿತ್ಯದ ಸಾಮಾನ್ಯ ಕಲ್ಪನೆ (೩) ಆಧುನಿಕ ಸಾಹಿತ್ಯದೊಳಗಿನ ಪ್ರಸಿದ್ಧ ಲೇಖಕರ ಪರಿಚಯ, ಅವರ ಮುಖ್ಯ ಕೃತಿಗಳ ವೈಶಿಷ್ಟ್ಯಗಳ ಕಲ್ಪನೆ (೪) ಪ್ರಚಲಿತ ಸಾಹಿತ್ಯದ ಸಮಸ್ಯೆಗಳ ಕಲ್ಪನ (೫) ಮುಖ್ಯ ದೈನಿಕ, ಮಾಸ ಪತ್ರಿಕೆಗಳ ಪರಿಚಯ (೬) ಸಾಹಿತ್ಯ ಸಂಸ್ಥೆಗಳ ಪರಿಚಯ (೭) ತಾನು ಓದಿದ ಕೃತಿಯಲ್ಲಿಯ ಸುಂದರ ವಾಕ್ಯ ನಾಣ್ಣುಡಿ, ಅಪೂರ್ವಪದ ಪ್ರಯೋಗಗಳನ್ನು ಬರೆದು ಇಟ್ಟುಕೊಳ್ಳುವದು. (೮) ಅವಶ್ಯವೆನಿಸಿದಾಗ ಶಬ್ದಕೋಶ ಉಪಯೋಗಿಸಲಿಕ್ಕೆ ಬರಬೇಕು (೯) ಗ್ರಂಥಗಳ ವಿಷಯಸೂಚಿ, ಶಬ್ದಸೂಚಿಗಳ ಉಪಯೋಗ ಮಾಡುವ ಯೋಗ್ಯತೆ ಸಂಪಾದಿಸುವುದು (೧೦) ತನಗೆ ಅವಶ್ಯವೆನಿಸಿದ ವಿಷಯವನ್ನು ಶಿಕ್ಷಕರ ಮಾರ್ಗದರ್ಶನವನ್ನು ಪಡೆದು, ವಿವಿಧ ಮಾಸಿಕ ಹಾಗು ಗ್ರಂಥಗಳಿಂದ ಸಂಗ್ರಹಿಸುವುದು (೧೧) ವೃತ್ತಪತ್ರದೊಳಗಿನ ಒಳ್ಳೆಯ ಲೇಖನ, ಉಪಯುಕ್ತ ಮಾಹಿತಿಯ ತುಂಡುಗಳನ್ನು ಸಂಗ್ರಹಿಸುವುದು

(ಉ) ಭಾಷಾಶಾಸ್ತ್ರದ ಅಭ್ಯಾಸ — (೧) ತಾವು ಓದಿದ ಭಾಗದಲ್ಲಿಯ ದೇಶ್ಯ, ಅನ್ಯದೇಶ್ಯ ಪದಗಳನ್ನು ಕಂಡು ಹಿಡಿಯುವುದು. (೨)

ಕೆಲವು ಶಬ್ದಗಳ ಉತ್ಪತ್ತಿಯನ್ನು ಅಭ್ಯಸಿಸುವುದು (೩) ಶಬ್ದಾಲಂಕಾರ, ಮುಖ್ಯ ಅರ್ಥಾಲಂಕಾರಗಳನ್ನು ತಿಳಿದುಕೊಳ್ಳುವುದು (೪) ಮಾತೃಭಾಷೆ ಯಲ್ಲಿದ್ದ ವೃತ್ತಗಳ ಲಕ್ಷಣ ಕಂಡುಕೊಳ್ಳುವುದು (೫) ಹೊಸ ಭಾವ ಗೀತಗಳ ಲಕ್ಷಣವನ್ನು ಅಭ್ಯಸಿಸುವುದು

× × × ×

ಇಲ್ಲಿ ಅಭ್ಯಾಸ ಕ್ರಮದಲ್ಲಿ ಮೂರು ವಿಭಾಗಗಳನ್ನು ಮಾಡಿ, ಅದರ ರೂಪರೇಷೆಗಳನ್ನು ಕೊಡಲು ಯತ್ನಿಸಲಾಗಿದೆ ಇದು ಬಹಳ ಸ್ಥೂಲ ಕಲ್ಪನೆಯಾಗಿದೆ ಶಿಕ್ಷಕರು ವರ್ಗಕ್ಕನುಸರಿಸಿ ಭಾಷೆಯ ಅಭ್ಯಾಸಪತ್ರಿಕೆ ಯನ್ನು ಸಿದ್ಧಪಡಿಸಿಕೊಳ್ಳಬೇಕಾಗುತ್ತದೆ ಅವರ ಎದುರಿಗೆ ಆಗ ಪಠ್ಯ ಪುಸ್ತಕಗಳೂ ಇರುತ್ತವೆ ಅವುಗಳಲ್ಲಿಯ ಕೆಲವು ಭಾಗ ಆಯಾ ವರ್ಗ ಗಳಲ್ಲಿ ಕಲಿಸಿ ಮುಗಿಸುವದಿರುತ್ತದೆ ವರ್ಷಕ್ಕೆ ಕಲಿಸಬೇಕಾದ ವಿಷಯ ಮುಗಿಯಲು ಪ್ರತಿ ತಿಂಗಳಲ್ಲಿ ಎಷ್ಟಾಗಬೇಕೆಂಬುದನ್ನು ಲೆಕ್ಕ ಹಾಕಿ,ತಿಂಗಳ ಅಭ್ಯಾಸಪತ್ರಿಕೆಯನ್ನು ರೂಪಿಸಿಕೊಳ್ಳಲಾಗುವುದು ಹೀಗೆ ಪಾಠಗಳ ಸಂಖ್ಯೆಯ ಲೆಖ್ಖದ ಮೇಲೆ ತಾಂತ್ರಿಕವಾಗಿ ಶಾಲೆಗಳಲ್ಲಿ ಭಾಷಾಭ್ಯಾಸ ನಾಗುವುದೇ ಹೆಚ್ಚಾಗಿದೆ. ಇದಕ್ಕೂ ಒಂದು ಕ್ರಮವಿದೆ, ನಿಜ, ಆದರೆ ಮಗು ಎಷ್ಟು ಪಾಠಗಳನ್ನು ಓದಿದ ಎನ್ನುವದಕ್ಕಿಂತ ಹೇಗೆ ಓದಿದ ಎಂಬುದೇ ಶಿಕ್ಷಣದಲ್ಲಿ ಮಹತ್ವದ್ದಾಗಿದೆ ಭಾಷಾ ಶಿಕ್ಷಣದಲ್ಲಿಯಂತೂ ಕೆಲವು ಪಾಠ ಗಳನ್ನು ಓದಿ, ಅವುಗಳಲ್ಲಿಯ ಕಠಿಣ ಶಬ್ದಗಳ ಅರ್ಥ ತಿಳಿದುಕೊಂಡು, ಹಲವು ವಾಕ್ಯಗಳನ್ನು ಸ್ಪಷ್ಟೀಕರಿಸಿ, ಓದಿದ ಗದ್ಯ-ಪದ್ಯಗಳ ವಿಷಯಕ್ಕಿರುವ ಪ್ರಶ್ನೆಗಳಿಗೆ ಉತ್ತರ ಹೇಳಲಿಕ್ಕೆ ಬಂದರೆ ತೀರಲಿಲ್ಲ ಇಷ್ಟರಿಂದ ಹಲವು ಜನ ಶಿಕ್ಷಕರು ಸಮಾಧಾನ ಹೊಂದಿಯೂ ಬಿಡಬಹುದು ಆದರೆ ಭಾಷಾ ಶಿಕ್ಷಣದ ಒರೆಗಲ್ಲು, ತಾನು ಕಲಿತ ಭಾಷಾ ಜ್ಞಾನವನ್ನು ವಿದ್ಯಾರ್ಥಿಯು ಹೇಗೆ ಉಪಯೋಗಿಸಲು ಬಲ್ಲವನಾಗುತ್ತಾನೆಂಬುದಾಗಿದೆ ಇದರ ಮೇಲಿಂದ ನಿಜವಾದ ಭಾಷಾ ಶಿಕ್ಷಕನ ಕೌಶಲ್ಯವನ್ನು ಅಳೆಯಲಾಗುತ್ತದೆ

ಅಭ್ಯಾಸಪತ್ರಿಕೆಯೆಂದೊಡನೆ ಅದು ವರ್ಗದಿಂದ ವರ್ಗಕ್ಕೆ ಮುಂದರಿ ದಂತೆ ವಿಸ್ತಾರವೂ ವಿವೇಚನಾತ್ಮಕವೂ ಆಳವೂ ಆಗುತ್ತ ಹೋಗಬೇಕಾಗು

ತ್ತದೆ ಅಲ್ಲದೆ ಒಂದು ವರ್ಷದ ಅವಧಿಯಲ್ಲಿ ಮುಗಿಯುವ ಪ್ರಮಾಣದಲ್ಲಿ ಅದನ್ನು ಅಳವಡಿಸಬೇಕಾಗುತ್ತದೆ ಇದಕ್ಕೆಲ್ಲ ಮಕ್ಕಳ ಮನೋವಿಕಾಸದ ತಳಹದಿ ಇರಬೇಕು ಇದು ಎಲ್ಲ ವಿಷಯಗಳ ಅಭ್ಯಾಸಪತ್ರಿಕೆಗೆ ಅನ್ವಯಿಸುವ ಸಾಮಾನ್ಯವಾದ ನಿಯಮವಾಗಿದ ಇದನ್ನು ಲಕ್ಷ್ಯದಲ್ಲಿಟ್ಟು, ತಾವು ಕಲಿಸಬೇಕಾದ ವಿದ್ಯಾರ್ಥಿಗಳ ಭಾಷೆಯ ಪೂರ್ವಜ್ಞಾನವನ್ನೂ ಗಮನಿಸಿ, ತಮ್ಮ ಮುಂದಿರುವ ಪಠ್ಯ ಪುಸ್ತಕಗಳನ್ನು ಅಭ್ಯಸಿಸಿ ಅಲ್ಲಲ್ಲಿಯ ವಾತಾವರಣಕ್ಕೆ ತಕ್ಕಂತೆ ಅಭ್ಯಾಸಕ್ರಮವನ್ನು ಶಿಕ್ಷಕರೇ ನಿರ್ಣಯಿಸಬೇಕಾಗುತ್ತದೆ ಅವರಿಗೆ ನಮ್ಮ ಸರಕಾರವು ಹಾಕಿಕೊಟ್ಟ ಅಭ್ಯಾಸಪತ್ರಿಕೆಯು ರಾಜಮಾರ್ಗವೂ ಎದುರಿಗೆ ಇರುತ್ತದೆ ಆದರೆ ಎಲ್ಲರಿಗೂ ಒಂದೇ ಅಳತೆಯ ಬಟ್ಟೆಗಳು ಮೈಗೆ ಹಾಳತವಾಗುವದಿಲ್ಲವೆಂಬುದನ್ನು ಗಮನಿಸಿ, ತಮ್ಮ ವರ್ಗದ ವಿದ್ಯಾರ್ಥಿಗಳ ಯೋಗ್ಯತೆಯನ್ನು ನೆನೆದು, ತಮ್ಮ ಅನುಭವದ ಆಧಾರದ ಮೇಲೆಯೇ ಆಯಾ ಶಾಲೆಗಳಲ್ಲಿ ಅಭ್ಯಾಸಕ್ರಮವನ್ನು ಶಿಕ್ಷಕರು ಸಿದ್ಧಗೊಳಿಸಿಕೊಳ್ಳುವುದು ಅದರಲ್ಲಿಯೇ ಭಾಷಾ ಶಿಕ್ಷಕನ ಶ್ರೇಯಸ್ಸಿದೆ

# ೫. ಶಿಕ್ಷಕನೂ ಪಠ್ಯಪುಸ್ತಕಗಳೂ

(೧)

ಭಾಷಾ ಶಿಕ್ಷಣದಲ್ಲಿ ಪಠ್ಯಪುಸ್ತಕ ಒಂದು ಸಾಧನ ಅದನ್ನು ಚೆನ್ನಾಗಿ ಉಪಯೋಗಿಸಿ, ಶಿಕ್ಷಣದ ಗುರಿಯನ್ನು ಸಾಧಿಸುವವ ಶಿಕ್ಷಕನು ಒಂದು ನಿರ್ಜೀವ, ಇನ್ನೊಂದು ಸಜೀವ ಅದರಿಂದ ಶಿಕ್ಷಣ ಕ್ಷೇತ್ರದಲ್ಲಿ ಯಾವಾಗಲೂ ಪಠ್ಯಪುಸ್ತಕಗಳಿಗಿಂತ ಶಿಕ್ಷಕರ ಯೋಗ್ಯತೆಗೇನೇ ಪ್ರಥಮಸ್ಥಾನವಿದೆ ತನಗೆ ಒಪ್ಪಿಗೆಯಾಗದ ಪಠ್ಯ ಪುಸ್ತಕವಿದ್ದರೂ ಅದರಲ್ಲಿಯ ಪಾಠಗಳ ಕ್ರಮ ವ್ಯತ್ಯಾಸವಾಗಿದ್ದರೂ ಎಲ್ಲ ತೊಂದರೆಗಳನ್ನೂ ಸರಿಪಡಿಸಿಕೊಂಡು, ತನ್ನ ಕಾರ್ಯವನ್ನು ಮುಂದರಿಸುವ ಶಕ್ತಿಯು ಶಿಕ್ಷಕನಲ್ಲಿ ಬೇಕು. ಪಠ್ಯಪುಸ್ತಕ ಸಮಿತಿಯವರು 'ನಾಡಹಬ್ಬ'ದ ಪಾಠವನ್ನು ಮೊದಲನೆಯದಾಗಿ ಕೊಟ್ಟು, 'ಕಾರಹುಣ್ಣಿ'ವೆಯ ಪಾಠವನ್ನು ಪುಸ್ತಕದ ಕೊನೆಯ ಭಾಗದಲ್ಲಿ ಸೇರಿಸಿದ ಬಹುದು ಊರಲ್ಲಿ ಕಾರಹುಣ್ಣಿವೆ ಒಂದಾಗ 'ಕಾರಹುಣ್ಣಿವೆ'ಯ ಪಾಠ ವನ್ನು ಮಹಾನವಮಿಯ ಸುಮಾರಕ್ಕೆ 'ನಾಡಹಬ್ಬ'ದ ಪಾಠವನ್ನೂ ಕಲಿಸುವ ಯೋಜನೆ, ಸ್ವಾತಂತ್ರ್ಯ ಶಿಕ್ಷಕನನ್ನು ಅವಲಂಬಿಸಿರುತ್ತದೆ ಇದರಲ್ಲಿ ಭಾಷಾ ಜ್ಞಾನದ ವಿಕಾಸದೃಷ್ಟಿಯಿಂದ, ಮಕ್ಕಳ ಪೂರ್ವಜ್ಞಾನದ ಸ್ಥಿತಿಯನ್ನು ಸುಧಾರಿಸಿಕೊಳ್ಳಲಿಕ್ಕೆ ಶಿಕ್ಷಕನು ಸಮರ್ಥನಾಗಿರಬೇಕು ಇದರಂತೆಯೇ ಪಠ್ಯಪುಸ್ತಕದಲ್ಲಿ ಪುರಾತನ ಕಾವ್ಯಗಳಲ್ಲಿಯ ಭಾಗಗಳನ್ನು ಮೊದಲು ಕೊಟ್ಟು, ಮುಂದೆ ಹೊಸ ಕವಿತೆಗಳನ್ನು ಸಂಪಾದಕರು ಹೊಂದಿಸಿರಬಹುದು ಕೇವಲ ನೀತಿಬೋಧಕ ಕವಿತೆಗಳನ್ನೆಲ್ಲ ಆರಿಸಿ ತೃಪ್ತಿ ಹೊಂದಿರಬಹುದು ಇಂಥ ಲ್ಲೆಲ್ಲ ಶಿಕ್ಷಕನು ಸ್ವಾತಂತ್ರ್ಯ ವಹಿಸಿ, ಪಾಠಗಳ ಕ್ರಮವನ್ನು ಹಿಂದೆ ಮುಂದೆ ಮಾಡಿಕೊಂಡು ಕಲಿಸಬಹುದು ಇಷ್ಟೇ ಅಲ್ಲ, ತನಗೆ ಸರಿದೋರಿದ, ಮಕ್ಕಳ ಶಿಕ್ಷಣಕ್ಕೆ ತಕ್ಕದಾದ ಬೇಕಾದ ಪದ್ಯವನ್ನೂ ಆಯ್ದು ತಂದು ಶಿಕ್ಷಕನು ಕಲಿಸಲೂ ಬರುವದು ಪಠ್ಯಪುಸ್ತಕಗಳೆಂಬಿವು ಭಾಷಾವಿಷಯದಲ್ಲಿ ಕೈಗಂಬಗಳೇ ಹೊರತಾಗಿ ಅವುಗಳನ್ನೇ ಶಿಕ್ಷಕನು ಅವಲಂಬಿಸಿ ನಡೆಯ ಬೇಕೆಂದಲ್ಲ ತನ್ನ ವಿದ್ಯಾರ್ಥಿಗಳ ಮನೋವಿಕಾಸ, ಸ್ವಭಾವಗಳಿಗೆ ಹೊಂದು ವಂಥ ಪುಸ್ತಕವನ್ನು ಪ್ರತಿಭಾವಂತ ಶಿಕ್ಷಕನು ನಿರ್ಮಿಸಿಕೊಳ್ಳಬಲ್ಲನು.

ಇಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಪುಸ್ತಕಗಳ ಸ್ಥಾನವನ್ನು ಅಲ್ಲಗಳೆಯುತ್ತೇವೆಂದು ಯಾರೂ ಭಾವಿಸಕೂಡದು ಪ್ರತಿಭಾವಂತ ಶಿಕ್ಷಕನಿಗೆ ಪಠ್ಯಪುಸ್ತಕದ ಬಂಧನ ಸರಿಹೋಗದೆಂದಿಷ್ಟೇ ಹೇಳುವ ಆಶಯ ನಮಗಿದೆ ಆದರೆ ಅಂಥ ಶಿಕ್ಷಕನು ನಿಜವಾಗಿಯೂ ಶಿಕ್ಷಣ ಪ್ರೇಮಿಯಾಗಿದ್ದು, ಭಾಷಾ ವಿಷಯವು ಅವನ ಒಲವಿನ ವಿಷಯವಾಗಿರಬೇಕಾಗುತ್ತದೆ ಅಲ್ಲದೆ ಅವನಿಗೆ ಶಿಕ್ಷಣಕಲೆಯ ತಂತ್ರಜ್ಞಾನ, ಭಾಷಾವ್ಯಾಸಂಗ, ಆದರ ಮೇಲೆ ಪ್ರಭುತ್ವಗಳು ಅವಶ್ಯವಾಗಿ ಬೇಕು ಇವೆಲ್ಲವುಗಳನ್ನೂ ಸಫಲಗೊಳಿಸುವಂಥ ವ್ಯಕ್ತಿತ್ವವೂ ಶಿಕ್ಷಕನಲ್ಲಿ ಮುಖ್ಯವಾಗಿ ಬೇಕು. ನಾಡಿನ ವಿಶಾಲವಾದ ಶಿಕ್ಷಣ ಕ್ಷೇತ್ರಕ್ಕೆ ಸಾಲುವಷ್ಟು, ಈ ಯೋಗ್ಯತೆಯ ವ್ಯಕ್ತಿಗಳೇ ದೊರೆಯುತ್ತಾರೆಂದೇನೂ ಅಲ್ಲ ಆದರೆ ಶಿಕ್ಷಕ ವೃತ್ತಿಗೆ ಸೇರಿದ ತರುವಾಯ ತಮ್ಮ ವೃತ್ತಿಗೌರವಕ್ಕಾಗಿಯೂ ಪ್ರಾಮಾಣಿಕತನಕ್ಕಾಗಿಯೂ ತಮ್ಮ ವ್ಯಾಸಂಗವನ್ನು ಹೆಚ್ಚಿಸಿಕೊಂಡು, ವಿಷಯದ ಮೇಲೆ ಪ್ರಭುತ್ವವನ್ನು ಸಂಪಾದಿಸಿ, ಒಲವನ್ನು ತಿದ್ದಿಕೊಂಡು, ಶಿಕ್ಷಕನು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕು ಶಿಕ್ಷಕನ ಈ ಸಾಧನೆಯ ಸ್ಥೂಲಾಂಶಗಳನ್ನಾದರೂ ಇಲ್ಲಿ ಕೊಡುವುದು ವಿಷಯಾಂತರ ವೆನಿಸಲಿಕ್ಕಿಲ್ಲ

ನಾವು ಶಾಲೆಯೊಳಗಿನ ಒಂದು ವರ್ಗವನ್ನು ನಿರೀಕ್ಷಿಸೋಣ ಒಬ್ಬ ವಿದ್ಯಾರ್ಥಿ ಗಣಿತದಲ್ಲಿ ಪ್ರಗತಿಯನ್ನು ಮಾಡಿಕೊಂಡಷ್ಟು ಭೂಗೋಲದಲ್ಲಿ ಮಾಡಿಕೊಂಡಿರುವದಿಲ್ಲ ಇನ್ನೊಬ್ಬನದು ಭಾಷಾವಿಷಯ ಚನ್ನಾಗಿದ್ದರೆ ಇತಿಹಾಸ ಒಳ್ಳೆಯದಿರುವದಿಲ್ಲ ಹೀಗೆ ಒಬ್ಬೊಬ್ಬರು ಒಂದೊಂದು ವಿಷಯ ದಲ್ಲಿ ಉಳಿದವರಿಗಿಂತ ಜಾಣರಾಗಿರುತ್ತಾರೆ ಇದಕ್ಕೆ ಆಯಾ ವಿಷಯ ಗಳಲ್ಲಿ ಅವರಿಗೆ ಇರುವ ಒಲವೇ ಕಾರಣವಾಗಿರುತ್ತದೆ. ಮುಂದೆ ಇಂಥ ತಮ್ಮ ಒಲವಿನ ವಿಷಯವನ್ನೇ ಕಲಿಸುವ ಪ್ರಸಂಗ ಬಂದರೆ ಆ ಶಿಕ್ಷಕರು ಬಹು ಆನಂದದಿಂದ ವಿಷಯದಲ್ಲಿ ತನ್ಮಯರಾಗಿ ಕಲಿಸುವರು ಶಿಕ್ಷಕನ ಈ ತನ್ಮಯತೆಯು ವಿದ್ಯಾರ್ಥಿಗಳ ಮೇಲೆ ಬಹಳ ಪರಿಣಾಮವನ್ನು ಮಾಡುತ್ತದೆ ಅಲ್ಲದೆ ಇಂಥ ಒಲವುಳ್ಳ ಮನುಷ್ಯನೇ ತನ್ನ ವಿಷಯದ ಆಳ ವಾದ ವ್ಯಾಸಂಗವನ್ನೂ ಹೊಸ ಹೊಸ ಗ್ರಂಥಗಳ ನಿರೀಕ್ಷಣವನ್ನೂ ಮಾಡು ತ್ತಾನೆ ಇದರಿಂದ ವಿಷಯದ ಮೇಲೆ ಪ್ರಭುತ್ವವು ಉಂಟಾಗುತ್ತದೆ ಇಂಥ

ಅಭಿಜಾತ ಒಲವುಳ್ಳ ಭಾಷಾ ಶಿಕ್ಷಕರಿಂದ ಭಾಷಾ ಶಿಕ್ಷಣ ಚೆನ್ನಾಗಿ ನಡೆಯುವುದು

ಇನ್ನು ಭಾಷಾ ವಿಷಯದಲ್ಲಿ ಕೇವಲ ಒಲವೊಂದು ಇದ್ದರೆ ತೀರದು. ಅದಕ್ಕೆ ಪೋಷಕವಾದ ವ್ಯಾಸಂಗವೃತ್ತಿಯೂ ಇರಬೇಕಾಗುತ್ತದೆ ತಾನು ವಿದ್ಯಾರ್ಥಿಗಳಿಗೆ ಶಿಕ್ಷಕನಾದರೂ ತನ್ನಷ್ಟಕ್ಕೆ ತಾನು ಯಾವಾಗಲೂ ವಿದ್ಯಾರ್ಥಿಯೇ ಆಗಿರಬೇಕಾಗುತ್ತದ ಮೇಲಿನ ತರಗತಿಗಳಿಗೆ ಕನ್ನಡ ಕಲಿಸುವ ಶಿಕ್ಷಕನು ಬಹಳಷ್ಟು ಓದಿಕೊಳ್ಳಬೇಕಾಗುವುದು ಪಠ್ಯಪುಸ್ತಕಕ್ಕೆ ಪೂರಕ ಲೇಖನಗಳು ಎಲ್ಲಿ ಪ್ರಕಟವಾಗಿವೆ—ಎಂಬುದನ್ನು ಸೂಚಿಸಿ ವಿದ್ಯಾರ್ಥಿಗಳ ವಿಶಾಲ ವ್ಯಾಸಂಗಕ್ಕೆ ನೆರವು ನೀಡುವ ಹೊಣೆಯು ಅವನದಿರುತ್ತದೆ ಅದರೊಡನೆ ದಿನದಿನಕ್ಕೂ ಬೆಳೆಯುತ್ತಿರುವ ಸಾಹಿತ್ಯದ ಒಲವು ನಿಲುವುಗಳನ್ನೆಲ್ಲ ಅರಿತುಕೊಂಡು, ಅದನ್ನು ವಿದ್ಯಾರ್ಥಿಗಳ ವರೆಗೂ ಮುಟ್ಟುವಂತೆ ಮಾಡಬೇಕು ಪ್ರಚಲಿತ ಸಾಹಿತ್ಯಿಕ ಸಮಸ್ಯೆಗಳಲ್ಲ ಅವನಿಗೆ ಗೊತ್ತಿರಬೇಕು ಸಾಹಿತ್ಯ ಪ್ರಕಾರ ಹಾಗೂ ಅವುಗಳ ತಂತ್ರಗಳ ಪರಿಚಯವು ಇರಬೇಕು ಇವೆಲ್ಲವನ್ನೂ ಸಾಧಿಸಿಕೊಳ್ಳಲಿಕ್ಕೆ ಅವನಿಗೆ ಭಾಷಾಪ್ರಭುತ್ವವೂ ಬೇಕಾಗುತ್ತದೆ. ಈ ಪ್ರಭುತ್ವವು ಶಿಕ್ಷಕನಲ್ಲಿಯಂತೂ ಮೂರೂ ಮುಖಗಳಲ್ಲಿ ಬೆಳೆದಿರಬೇಕು. ವಾಚನ, ಭಾಷಣ, ಲೇಖನ ಯಾವ ವಿಷಯವನ್ನು ಎತ್ತಿಕೊಂಡರೂ ಅದರಲ್ಲಿ ಶಿಕ್ಷಕ ತನ್ನ ಪ್ರಭುತ್ವವನ್ನು ಬೀರುವಂಥವನಿರಬೇಕು

ಈ ಶಿಕ್ಷಕನ ಭಾಷಾ ಪ್ರಭುತ್ವವು ವಿವಿಧ ವಯಸ್ಸಿನ ಮಕ್ಕಳೊಡನೆ, ಅವರ ಮನೋವೃತ್ತಿ ಹಾಗೂ ಭಾಷೆಗಳ ಮಟ್ಟಕ್ಕೆ ಹೊಂದಿಕೊಂಡು ಕಲಿಸುವ ಕಲೆಯನ್ನು ತಂದುಕೊಡುತ್ತದೆ ಚಿಕ್ಕಮಕ್ಕಳಿಗೆ ಕಲಿಸುವ ಪದ್ಧತಿಗೂ ಮೇಲಿನ ವರ್ಗಗಳಲ್ಲಿ ಬೋಧಿಸುವ ರೀತಿಗೂ ನೆಲ–ಮುಗಿಲುಗಳಷ್ಟು ಅಂತರವಿರುತ್ತದೆ ಅದರಿಂದ ಶಿಕ್ಷಕನು ಮಕ್ಕಳೊಡನೆ ಚಕ್ಕಂದವಾಡುತ್ತ ನಕ್ಕು ನಗಿಸಿ, ಕುಣಿದು ಕುಣಿಸಿ ಮಕ್ಕಳೊಡನೆ ಮಗುವಾಗಿ ಭಾಷಾವಿಷಯ ಹೇಳಿಕೊಡಬೇಕು ಇನ್ನೊಂದು ಕ್ಷಣದಲ್ಲಿ ಗಂಭೀರವಾಗಿ ಆಕಾಶದಲ್ಲಿ ಹಾರಿಹೋಗುವ ವಿಮಾನದ ಓಟದಂತೆ ವಾಙ್ಮಯದ ಚರಿತ್ರೆಯನ್ನು ಮೇಲ್ತರಗತಿಯಲ್ಲಿ ನಿರೂಪಿಸಬೇಕಾಗುತ್ತದೆ.

ಭಾಷಾ ಪ್ರಭುತ್ವ, ಶಿಕ್ಷಣ ಶಾಸ್ತ್ರಗಳಷ್ಟರಿಂದಲೇ ಶಿಕ್ಷಕನು ವಿದ್ಯಾರ್ಥಿಗಳೊಡನೆ ಸಮರಸನಾಗಿ ಹೋಗುವುದು ಸಾಧ್ಯವಿಲ್ಲ. ಇದಕ್ಕೆ ಪೋಷಕವಾಗಿ ಶಿಕ್ಷಕನ ಅಂಥ ಒಂದು ವಿಶಿಷ್ಟ ವ್ಯಕ್ತಿತ್ವವು ಬೇಕಾಗುತ್ತದೆ ಒಲವು, ವ್ಯಾಸಂಗ, ವಿಷಯ ಪ್ರಭುತ್ವ, ಶಿಕ್ಷಣ ಶಾಸ್ತ್ರಗಳ ಪರಿಚಯ—ಇವೆಲ್ಲವನ್ನೂ ಸಾರ್ಥಕಗೊಳಿಸುವುದು ಶಿಕ್ಷಕನ ವ್ಯಕ್ತಿತ್ವವೇ ಈ ವ್ಯಕ್ತಿತ್ವವು ನಿರ್ಮಾಣವಾಗಬೇಕಾದರೆ ಶಿಕ್ಷಕನಲ್ಲಿ ತನ್ನ ವೃತ್ತಿಯ ಬಗ್ಗೆ ಗೌರವ ಭಾವವಿರಬೇಕು ಕಲಿಸುವ ವಿಷಯದ ಬಗ್ಗೆ ಕಳಕಳಿಯೂ ಇರುವುದು ಅವಶ್ಯವಿದೆ ಹೃದಯದಿಂದ ಹೊರಟ ಮಾತೇ ಹೃದಯಕ್ಕೆ ಹೋಗಿ ಮುಟ್ಟುವುದುಂಟು ಹೃತ್‌ಪೂರ್ವಕವಾಗಿ ಕಲಿಸದ ಶಿಕ್ಷಕನು ನೂರು ಗಂಟೆಗಳನ್ನು ಕಲಿಸಿದ್ದು ಹೃತ್‌ಪೂರ್ವಕವಾಗಿ ಕಲಿಸುವ ಶಿಕ್ಷಕನ ಮೂರು ಗಂಟೆಯ ಶಿಕ್ಷಣಕ್ಕೆ ಸಮವಾಗಲಾರದು ಅದರಿಂದ ಶಿಕ್ಷಣ ಕಾರ್ಯದಲ್ಲಿ ಶಿಕ್ಷಕನ ವ್ಯಕ್ತಿತ್ವಕ್ಕೆ ಬಹಳ ಮಹತ್ವದ ಸ್ಥಾನವಿದೆ. ಅವನ ನಡೆ-ನುಡಿ, ಅವನು ವರ್ಗದಲ್ಲಿ ವಿದ್ಯಾರ್ಥಿಗಳೊಡನೆ ನಡೆದುಕೊಳ್ಳುವ ರೀತಿ–ನೀತಿ, ಶಿಷ್ಯರ ತಪ್ಪು-ಒಪ್ಪುಗಳನ್ನೆಲ್ಲ ಸೂಕ್ಷ್ಮವಾಗಿ ಲಕ್ಷಿಸಿ ಉಪಾಯ ಯೋಜಿಸುವ ನೈಪುಣ್ಯಗಳೆಲ್ಲವೂ ಶಿಕ್ಷಕನ ವ್ಯಕ್ತಿತ್ವವನ್ನು ರೂಪಿಸುತ್ತವೆ ಹೇಗಾದರೂ ಸಂಬಳಕ್ಕಾಗಿ ಶಾಲೆಯಲ್ಲಿ ವೇಳೆ ಕಳೆದರಾಯಿತೆಂಬವರಲ್ಲಿ ವ್ಯಕ್ತಿತ್ವವೆಂಬುದೇ ನಿರ್ಮಾಣವಾಗದು ಇವರಿಂದ ಶಿಕ್ಷಣ ಕಾರ್ಯ ಯಶಸ್ವಿಯಾಗಿ ಸಾಗದು. ವ್ಯಕ್ತಿತ್ವವಿಲ್ಲದ ಶಿಕ್ಷಕರಿಗೆ ಎಂಥ ಒಳ್ಳಯ ಶಾಲಾಮಂದಿರನ್ನೂ ಅದೆಂಥ ಒಳ್ಳೆಯ ವಿದ್ಯಾರ್ಥಿಗಳನ್ನೂ ಮಾದರಿಯ ಪಠ್ಯಪುಸ್ತಕಗಳನ್ನೂ ಒದಗಿಸಿ ಕೈತುಂಬಸಂಬಳ ಕೊಟ್ಟರೂ ಶಿಕ್ಷಣದಲ್ಲಿ ಪ್ರಗತಿಯಾಗದು

(೨)

ಮೇಲೆ ಆದರ್ಶ ಶಿಕ್ಷಕನ ಕಲ್ಪನೆಯನ್ನು ಕೊಡಲಾಯಿತು ಆದರೆ ಎಲ್ಲ ಕಡೆಗೂ ಇಂಥ ಶಿಕ್ಷಕರು ಲಭಿಸುವುದು ಸಾಧ್ಯವಿಲ್ಲ ಅದರಿಂದ ಶಿಕ್ಷಕನಲ್ಲಿರುವ ಕೆಲವು ಕೊರತೆಗಳನ್ನು ಪಠ್ಯಪುಸ್ತಕಗಳು ತುಂಬಿಕೊಳ್ಳುವಂಥವಿರಬೇಕು. ವಿದ್ಯಾರ್ಥಿಗಳ ಮನೋವಿಕಾಸಕ್ಕೂ ಮಕ್ಕಳ ಭಾಷಾ ಜ್ಞಾನಕ್ಕೂ ಅನುಸರಿಸಿ ಪಠ್ಯಪುಸ್ತಕಗಳ ರಚನೆಯಾಗಿರಬೇಕೆಂಬುದು

ನಿಜ ಅದರ ಜೊತೆಗೆ ಅವು ಸ್ವಯಂಪೂರ್ಣವೂ ಆಗಿರಬೇಕು ಅಷ್ಟೊಂದನ್ನೇ ಅವಲಂಬಿಸಿಯೂ ಚತುರ ಶಿಕ್ಷಕನು ಭಾಷಾವಿಷಯವನ್ನು ಕಲಿಸುವಂತಿರಬೇಕು. ಹೀಗಾಗಬೇಕೆಂದರೆ ಪಠ್ಯಪುಸ್ತಕಗಳು ಎರಡು ವಿಧದಲ್ಲಿ ರಚಿಸಲ್ಪಡಬೇಕು ಪ್ರತಿಯೊಂದು ವರ್ಗಕ್ಕೂ ಒಂದು ಸೂಕ್ಷ್ಮ ಅಭ್ಯಾಸಕ್ಕಾಗಿ ಪಠ್ಯಪುಸ್ತಕ ಇರಬೇಕು ಇನ್ನೊಂದು ಪೂರಕ ವಾಚನಕ್ಕೆ ಪುಸ್ತಕ ಬೇಕು ಇವುಗಳಲ್ಲಿ ಪಠ್ಯಪುಸ್ತಕವು ವಿವಿಧ ಲೇಖಕರ ಗದ್ಯ-ಪದ್ಯಗಳಿಂದ ಕೂಡಿದ್ದೂ ಪಾಠಗಳಿಗೆ ಅಭ್ಯಸನ, ಕೊನೆಗೆ ಶಬ್ದಕೋಶಗಳುಳ್ಳದ್ದೂ ಇರುವುದು ಉಚಿತ ಇದನ್ನು ಅಭ್ಯಸಿಸಿದ ವಿದ್ಯಾರ್ಥಿಯು ಸುಲಭವಾಗಿ ಓದಲೂ ತಿಳಿದುಕೊಳ್ಳಲೂ ಸಾಧ್ಯವಾಗುವಂಥ ಪೂರಕ ವಾಚನವು ಇರಬೇಕು ಅಂದರೆ ಅವರಿಗೆ ಸಹಜಾನಂದ ಒದಗುವುದು ಭಾಷೆಯ ಕಡೆಗೆ ಮನಸ್ಸು ಒಲಿಯುವುದು ಪಠ್ಯಪುಸ್ತಕಗಳಲ್ಲಿ ಕಲಿತ ಕಠಿಣ ಶಬ್ದ, ಪದಪ್ರಯೋಗ, ವಾಕ್ಯ ಪ್ರಚಾರಗಳೆಲ್ಲ ಈ ಪೂರಕ ವಾಚನದಲ್ಲಿ ಬೇರೆ ಬೇರೆ ರೀತಿಯಿಂದ ಉಪಯೋಗಿಸಲ್ಪಟ್ಟಿರಬೇಕು ಅಂದರೆ ಅವುಗಳನ್ನು ಪ್ರಯೋಗಿಸುವ ಜ್ಞಾನವು ಮಕ್ಕಳಿಗೆ ಆಗವುದು ಅಲ್ಲದೆ ಪಠ್ಯಪುಸ್ತಕದ ಜ್ಞಾನವೂ ಸ್ಥಿರಗೊಳ್ಳುವುದು

ಇನ್ನು ಪಠ್ಯಪುಸ್ತಕಗಳನ್ನು ವಿವಿಧ ಲೇಖಕರ ಗದ್ಯ-ಪದ್ಯಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ರೂಪಿಸುವರೆಂದು ಮೇಲೆ ಹೇಳಿತು ಹೀಗೆ ಪಠ್ಯಪುಸ್ತಕಕ್ಕಾಗಿ ಸಿದ್ಧಗೊಳಿಸಿದ ಸಂಗ್ರಹವು ವಿವೇಚನಾ ರಹಿತವಾಗಿ ಸಂಪಾದಿಸಿದ್ದರೆ ಆಗದು ಭಾಷಾ ವೈವಿಧ್ಯಕ್ಕಾಗಿ, ಶೈಲಿಗಳ ಮಾದರಿಗಾಗಿ ಅನೇಕ ಲೇಖಕರ ಕೃತಿಗಳಿಂದ ಗದ್ಯ-ಪದ್ಯಗಳನ್ನು ಆರಿಸಿಕೊಳ್ಳಲಾಗುತ್ತದೆ ಇವು ಪ್ರತಿಯೊಂದೂ ಸ್ವಯಂಪೂರ್ಣವಾಗಿರತಕ್ಕದ್ದು ಶಕ್ಯವಿದ್ದಷ್ಟು ಪಾಠಗಳು ಮುಂದರಿದಂತೆ ಹಿಂದಿನ ಪಾಠಗಳಲ್ಲಿ ಬಂದ ಶಬ್ದಗಳು ಹೆಚ್ಚೆಚ್ಚು ಬಳಿಕೆಯಲ್ಲಿ ಬರುವಂತ ಇರಬೇಕು ಅಲ್ಲದೆ ಭಾಷೆಯೂ ಪ್ರೌಢವಾಗುತ್ತ ಹೋಗಬೇಕು ಇನ್ನು ಭಾಷಾವಿಷಯಕ್ಕೆಂದು ಸಿದ್ಧಗೊಳಿಸುವ ಪುಸ್ತಕವು ವಿದ್ಯಾರ್ಥಿಗಳಿಗೆ ವಿವಿಧ ವಿಷಯಗಳ ಜ್ಞಾನವನ್ನು ಮಾಡಿಕೊಡುವ ಗುರಿಯನ್ನು ಮುಖ್ಯವೆಂದು ಇಟ್ಟುಕೊಳ್ಳಬಾರದು ಆದರೆ ಸಾಹಿತ್ಯದ ವಿವಿಧ ಅಂಗಗಳಾದ ಕಥೆ, ನಾಟಕ, ಪ್ರಬಂಧ, ಪ್ರಹಸನ, ಕವನ

ಇತ್ಯಾದಿಗಳಲ್ಲಿಪರ ಪರಿಚಯವು ವಿದ್ಯಾರ್ಥಿಗಳಿಗೆ ಆಗುವಂತೆ ನೋಡಿ ಕೊಳ್ಳಬೇಕು ಪಠ್ಯ ಪುಸ್ತಕದಲ್ಲಿ ಗದ್ಯವನ್ನು ಆಯ್ದುಕೊಳ್ಳುವಾಗ ಅದೊಂದು ಹೊಸ ವಿಷಯದ ಮೇಲೆ ಬರೆದುದಾಗಿದೆಯೋ ಎಂದು ಅವಲೋಕಿಸದೆ ಭಾಷಾ ಸೌಂದರ್ಯ, ಭಾವ ಸೌಂದರ್ಯಗಳ ಕಡೆಗೆ ಗಮನವಿಟ್ಟು ಆಯ್ದುಕೊಳ್ಳಬೇಕು. ಹೀಗಿದ್ದೂ ವಯಸ್ಸಿಗೆ ತಕ್ಕಂತೆ ಮಕ್ಕಳ ಜ್ಞಾನತೃಷೆಯನ್ನು ಪೂರೈಸುವ ಸಂಕಲನವು ಒಳ್ಳೆಯ ಪಠ್ಯಪುಸ್ತಕ ವೆನಿಸುವುದು

ಇಂಥ ಭಾಷಾವಿಷಯದ ಪಠ್ಯಪುಸ್ತಕಗಳಲ್ಲಿ ಮಾತೃಭಾಷೆಯಲ್ಲಿ ಬರೆದ ಲೇಖನ ಕವಿತೆಗಳನ್ನು ಆಯ್ದು ಸಂಗ್ರಹಿಸುವ ಜೊತೆಗೆ ಇತರ ಭಾಷೆಗಳ ಕೆಲವು ಗದ್ಯ-ಪದ್ಯಗಳನ್ನೂ ಚನ್ನಾಗಿ ರೂಪಾಂತರಿಸಿ ಹಾಕಬಹುದು ಇದ ರಿಂದ ವಿದ್ಯಾರ್ಥಿಗಳ ದೃಷ್ಟಿಕೋಣ ವಿಶಾಲವಾಗುತ್ತದೆ. ಭಾಷಾ ಬಾಂಧವ್ಯ ಬೆಳೆಯುತ್ತದೆ ಬೇರೆ ಬೇರೆ ಕಡೆಗಳಲ್ಲಿ ಸಾಹಿತ್ಯವು ಹೇಗೆ ಅಭಿವೃದ್ಧಿ ಹೊಂದುತ್ತಿದೆ ಎಂಬುದರ ಕಲ್ಪನೆಯೂ ಬರುತ್ತದೆ ಹೀಗೆ ಮಾಡುವುದರಿಂದ ಸಾಹಿತ್ಯಗಳ ತುಲನಾತ್ಮಕ ಅಭ್ಯಾಸಕ್ಕೂ ಪ್ರೋತ್ಸಾಹ ಸಿಕ್ಕಂತೆ ಆಗುವುದು

ಇನ್ನು ಭಾಷಾವಿಷಯಕ್ಕೆಂದು ಆಯ್ದುಕೊಳ್ಳುವ ಗದ್ಯ–ಪದ್ಯಗಳ ಭಾಷೆಯು ಜೀವಂತವಾಗಿರಬೇಕು ಅದು ಕೃತ್ರಿಮವಿದ್ದು ಉಪಯೋಗವಿಲ್ಲ ಅಲ್ಲದೆ ವಿದ್ಯಾರ್ಥಿಗಳ ಸುತ್ತಲಿನ ಇಲ್ಲವೆ ಲೇಖಕನ ಸುತ್ತಲಿನ ಜೀವನ, ಸಂಸ್ಕೃತಿ, ದೇಶದ ರೀತಿ-ನೀತಿಗಳನ್ನು ಪ್ರತಿನಿಧಿಸುವಂಥ ಗದ್ಯ–ಪದ್ಯಗಳು ಇರಬೇಕು. ಭಾವ ಸ್ಪಷ್ಟವಾಗಿರಬೇಕು ಹಾಗೆ ಇರದ ಹಾಗೂ ಮಕ್ಕಳ ಯೋಗ್ಯತೆಗೆ ಸಲ್ಲದ ಇರುವ ಕೆಲವು ವಾಕ್ಯವೃಂದಗಳನ್ನು ಪಾಠ ದಿಂದ ತೆಗೆದು ಹಾಕಿ ಲೇಖಕನ ಮೂಲ ವಿಚಾರಕ್ರಮಕ್ಕೆ ಬಾಧೆ ಬರದಂತೆ ಸಂಗ್ರಹಿಸಿಯೂ ಸಂಪಾದಕರು ಪಠ್ಯಪುಸ್ತಕಗಳಿಗ ಉಪಯೋಗಿಸಿ ಕೊಳ್ಳಬಹುದು.

ಭಾಷಾಭ್ಯಾಸದಿಂದ ಮಕ್ಕಳಲ್ಲಿ ಮುಖ್ಯವಾಗಿ ವಾಙ್ಮಯ ಪ್ರೇಮವನ್ನು ನಿರ್ಮಾಣ ಮಾಡುವದಿರುತ್ತದೆ. ಅದಕ್ಕಾಗಿ ಅವರು ಸ್ವತಂತ್ರವಾಗಿ ಓದ

ಲಿಕ್ಕೆ ಕೆಲವು ಪುಸ್ತಕಗಳನ್ನು ಶಿಕ್ಷಕರು ಒದಗಿಸಬೇಕು ಅವು ಹೊಸ ಹೊಸ ವಿಚಾರಗಳಿಂದ ಕೂಡಿದ್ದು, ಸ್ವಯಂಪೂರ್ಣವೂ ಸುಲಭ ಭಾಷೆ ಯಲ್ಲಿ ಬರೆದಂಥವೂ ಇರಬೇಕು ಇಂಥವುಗಳಿಂದ ಶಾಲೆಯ ವಾಚನಾ ಲಯವನ್ನು ಪುಷ್ಟಗೊಳಿಸುವುದು ಉತ್ತಮ ಕ್ರಮವಾಗಿದೆ

ಸಾಮಾನ್ಯವಾಗಿ ಭಾಷಾಭ್ಯಾಸದ ಪಠ್ಯ ಹಾಗೂ ಪಠ್ಯೇತರ ಪುಸ್ತಕ ಗಳ ಅಂತರಂಗ ಸೌಂದರ್ಯವನ್ನು ಮೇಲೆ ವಿವೇಚಿಸಲಾಯಿತು ಇನ್ನು ಬಹಿರಂಗ ಸೌಂದರ್ಯದ ಕಡೆಗೂ ನಮ್ಮ ಲಕ್ಷ್ಯವಿರಬೇಕು ಚಿಕ್ಕಮಕ್ಕಳ ಗ್ರಂಥಗಳು ಹೆಚ್ಚು ಶಿಶುಗೀತಗಳಿಂದ ಕೂಡಿದ್ದು, ದಪ್ಪಕ್ಷರ, ಸುಂದರ ಕಾಗದ, ಹಲವು ಚಿತ್ರಗಳಿಂದ ಕೂಡಿ ಮನೋಹರವಾಗಿರಬೇಕು ನೋಡಿ ದೊಡನೆ ಮಕ್ಕಳು ಹರ್ಷದಿಂದ ಅದನ್ನು ಎತ್ತಿಕೊಳ್ಳುವಂತಿರಬೇಕು. ಮೇಲಿನ ತರಗತಿಗಳಿಗಾದರೂ ಒಳ್ಳೆಯ ಮುದ್ರಣ, ಸುಂದರ ಕಟ್ಟುಗಳಿಂದ ಪುಸ್ತಕಗಳನ್ನು ಸಿದ್ಧಗೊಳಿಸುವುದು ಉತ್ತಮ ಅದರಿಂದ ವಿದ್ಯಾರ್ಥಿಗಳ ಮನೋವೃತ್ತಿ ಉಲ್ಲಸಿತವಾಗಿರುತ್ತದೆ

ಭಾಷಾ ಶಿಕ್ಷಣವು ಪಠ್ಯಪುಸ್ತಕಗಳ ಅಂತರಂಗ ಬಹಿರಂಗ ಸೌಂದರ್ಯ ದಿಂದಲೂ ಶಿಕ್ಷಕರ ಒಲವು, ವ್ಯಾಸಂಗ, ವ್ಯಕ್ತಿತ್ವಗಳಿಂದಲೂ ಆಕರ್ಷಕ ವಾಗಬೇಕು ಅಂತರೆ ವಿದ್ಯಾರ್ಥಿಗಳು ಭಾಷಾಭ್ಯಾಸವೆಂದರೆ ಒಂದು ಕುಳಿತು ಆಡುವ ಆಟ, ಕೇಳುವ ಮನೋಹರ ಪ್ರಸಂಗವೆಂದು ತಿಳಿಯು ವರು ಇಂದ ಮನೋರಂಜನೆಯಲ್ಲಿಯೇ ಅವರಿಗೆ ಭಾಷಾ ಸಂಸ್ಕಾರವೂ ಆತ್ಮವಿಕಾಸವೂ ಒದಗುತ್ತ ಹೋಗಬೇಕು ಅದರಿಂದ ಅವರು ಸ್ವಾಧ್ಯಾಯ ಪ್ರಿಯರೂ ಸಮರ್ಥರೂ ಆಗಿ, ತಮ್ಮ ವ್ಯಕ್ತಿತ್ವವನ್ನೂ ಜೀವನವನ್ನೂ ರೂಪಿಸಿ ಕೊಳ್ಳಲು ಶಕ್ತರಾಗುವರು



## ೬. ಗದ್ಯ ಶಿಕ್ಷಣ

ಇಲ್ಲಿಯ ವರೆಗೆ ಬಾಷಾ ಶಿಕ್ಷಣದ ವಿವಿಧ ಅಂಗಗಳನ್ನು ವಿವೇಚಿಸಿದ್ದಾಯಿತು ಅಲ್ಲದೆ ಈ ಶಿಕ್ಷಣಕ್ಕೆ ಸಂಬಂಧಿಸಿದ ಶಿಕ್ಷಕ ಹಾಗೂ ಪಠ್ಯಪುಸ್ತಕಗಳನ್ನು ಕುರಿತು ಕೆಲವು ವಿಚಾರಗಳನ್ನು ಮಂಡಿಸಲಾಯಿತು ಇನ್ನು ಪ್ರತ್ಯಕ್ಷ ಶಿಕ್ಷಣ ಕಲೆಯ ವಿಷಯಕ್ಕೇನೇ ಈಗ ಬಂದು ಮುಟ್ಟಿದಂತಾಯಿತು. ಯಾವ ಕಲೆಯಲ್ಲಿಯೇ ಆಗಲಿ ಅದಕ್ಕೆ ಆಧಾರಭೂತವಾದ ಶಾಸ್ತ್ರವನ್ನು ಎಷ್ಟು ವಿವರಿಸಿದರೂ ಕೂಡ ಒಂದು ತರದ ಕೊರತೆಯು ಉಳಿದೇ ಉಳಿಯುವುದು ಆ ಕೊರತೆಯು ಪ್ರತ್ಯಕ್ಷ ಕ್ರಿಯೆಯಿಂದಲೇ ತುಂಬುವುದು ಸಾಧ್ಯ ಅದರಿಂದ ಕೆಳಗೆ ಕಾಣಿಸಿದ ಕೆಲವು ಶಿಕ್ಷಣ ಶಾಸ್ತ್ರದ ಸೂತ್ರಗಳನ್ನು ಉಪಯೋಗಿಸಿ, ಶಿಕ್ಷಕರು ತಮ್ಮ ಕಲಿಸುವಿಕೆಯಲ್ಲಿ ಕಲೆಯನ್ನು ವ್ಯಕ್ತಪಡಿಸಿದಾಗಲೇ ಅದು ಅವರವರಿಗೆ ಆಗ ಸ್ಪಷ್ಟವಾಗುವುದು. ಆಗಲೇ ಈ ವಿಭಾಗದ ವಿವರಣೆಯು ಪೂರ್ಣಗೊಳ್ಳುವುದು. ಯಾಕೆಂದರೆ ಇನ್ನು ಮುಂದಿನ ವಿವರಣೆಯು ಶಿಕ್ಷಣಕಲೆಯಲ್ಲಿ ವ್ಯಕ್ತವಾಗುವ ಶಾಸ್ತ್ರವಿದೆ ಈ ಶಾಸ್ತ್ರವು ಕಲೆಯ ಹಿಂದೆ ಯಾವಾಗಲೂ ಅಮೂರ್ತವಾಗಿರುತ್ತದೆ ಇಂದ ಅಮೂರ್ತ ನಿಯಮಕ್ಕನುಸರಿಸಿ ಶಿಕ್ಷಣ ಕಲೆಯು ರೂಪುಗೊಳ್ಳುತ್ತಿರುತ್ತದೆ ಆ ಅಮೂರ್ತವನ್ನು ನುಡಿಗನ್ನಡಿಯಲ್ಲಿ ಹಿಡಿದಿಡುವ ಪ್ರಯತ್ನವೇ ಶಾಸ್ತ್ರವೆನಿಸುವುದು ಅದರ ಸ್ಥೂಲ ಚಿತ್ರವನ್ನು ಇಲ್ಲಿ ಕೊಡಲಾಗುವುದು ಇದೊಂದು ಅಧ್ಯಾಪನ ಕಲೆಯ ದಿಕ್ಸೂಚಿಯೆಂದು ಮಾತ್ರ ಇಟ್ಟುಕೊಳ್ಳುವುದು.

ಈಗ ನಾವು ಒಂದು ಗದ್ಯಪಾಠವನ್ನು ವಿದ್ಯಾರ್ಥಿಗಳಿಗೆ ಕಲಿಸಲಿಕ್ಕೆ ತಕ್ಕೊಂಡೆನೆಂದು ತಿಳಿಯುವ ಆಗ ನಾವು ಮೂರು ಮಾತುಗಳ ಕಡೆಗೆ ಲಕ್ಷ್ಯವನ್ನು ಮೊದಲು ಕೊಡಬೇಕಾಗುವುದು (೧) ಗದ್ಯ ವಿಭಾಗದ ಸ್ವರೂಪ (೨) ಅದನ್ನು ಯಾವ ತರಗತಿಯ-ವಯಸ್ಸಿನ ಮಕ್ಕಳಿಗೆ ಕಲಿಸುತ್ತಿದ್ದೇವೆ. (೩) ಆ ಪಾಠದಿಂದ ಯಾವ ಮುಖ್ಯ ವಿಚಾರ ಅಥವಾ ಭಾವವನ್ನು ಮಕ್ಕಳ ಮನಸ್ಸಿನ ಮೇಲೆ ಮೂಡಿಸುವದಿದೆ – ಈ ಮೂರು ಮಾತುಗಳ ಮೇಲೆ ನಮ್ಮ ಶಿಕ್ಷಣದ ವಿವೇಚನ-ಸ್ವರೂಪ ಅವಲಂಬಿಸಿರುತ್ತದೆ

ಯಾವುದೇ ಒಂದು ಗದ್ಯಭಾಗವನ್ನು ಎತ್ತಿಕೊಂಡಾಗ ಅದು ವಿಚಾರ ಪ್ರಧಾನವಾದುದೋ ಭಾವಪ್ರಧಾನವಾದುದೋ — ಎಂಬುದನ್ನು ಶಿಕ್ಷಕರು ಮೊದಲು ಅರಿತುಕೊಳ್ಳಬೇಕು ಇದು ಗದ್ಯದ ಸ್ವರೂಪದರ್ಶನ ಮಾಡಿಸುವದು ಇದರಿಂದ ಪಾಠದ ರಚನೆಯು ಭಿನ್ನ ಭಿನ್ನವಾಗುವುದು. ವಿಚಾರ ಪ್ರಧಾನ ಗದ್ಯವನ್ನು ಕಲಿಸುವದಾದರೆ ಅದನ್ನು ತುಂಡು ತುಂಡಾಗಿ ಹಂಚಿಕೊಂಡು ಕಲಿಸಬಹುದು ಭಾವ ಪ್ರಧಾನ ಗದ್ಯ—ಕಥೆ, ನಾಟಕ, ಪ್ರಹಸನ ಇತ್ಯಾದಿ—ವನ್ನು ಅಭ್ಯಾಸಕ್ಕೆ ಅಖಂಡವಾಗಿ ಇಟ್ಟುಕೊಳ್ಳ ಬೇಕಾಗುತ್ತದೆ ಅದರಂತೆ ವಿಚಾರಪ್ರಧಾನ ಗದ್ಯವಿಭಾಗವನ್ನು ಕಲಿಸು ವಾಗ ಕಠಿಣ ಪದಗಳ ಅರ್ಥ, ವಿಶಿಷ್ಟ ವಾಕ್ಯಪ್ರಯೋಗ, ವಿಚಾರದ ವಿವಿಧ ಮಾರ್ಗಗಳನ್ನು ನಡು ನಡುವೆ ವಿವರಿಸುತ್ತ ಸಾಗಲಿಕ್ಕೆ ಸಾಧ್ಯವಿದೆ ಉಚಿತವೂ ಆಗುತ್ತದೆ ಲೇಖಕರ ವಿಚಾರಕ್ರಮದಲ್ಲಿಯ ಮೆಟ್ಟಲುಗಳನ್ನು ಗುರುತಿಸಿ, ಕರೀ ಹಲಿಗೆಯ ಮೇಲೆ ಮುಖ್ಯ ಮುದ್ದೆಗಳನ್ನು ಮಕ್ಕಳ ಗಮನದಲ್ಲಿ ತರಲು ಬರೆದಿಡುತ್ತ ಸಾಗಲೂ ಬರುತ್ತದೆ ಅಲ್ಲದೆ ಮುಖ್ಯ ವಿಷಯಕ್ಕೆ ಸಂಬಂಧಿಸಿದ ಪಠ್ಯೇತರ ವಿಷಯವನ್ನು ಅಲ್ಲಲ್ಲಿ ವಿವರಿಸಿದರೆ ಅನುಚಿತವೆನಿಸುವದಿಲ್ಲ ಆದರೆ ಭಾವಪ್ರಧಾನ ಗದ್ಯಕ್ಕೆ ಇಂಥ ವಿವರಣೆ ಯಾವುದೂ ನಡುವೆ ಉಪಕಾರಕವೆನಿಸದು ಅಲ್ಲಿಯ ಪರಿಣಾಮವು ಸನ್ನಿ ವೇಶ ಚಿತ್ರಣ, ಪಾತ್ರಸೃಷ್ಟಿಗಳನ್ನು ಅವಲಂಬಿಸಿರುತ್ತವೆ ಆದರಿಂದ ಪಾಠಕ್ಕೆ ತಕ್ಕ ವಾತಾವರಣವನ್ನು ಕಲ್ಪಿಸಿಕೊಳ್ಳಲಿಕ್ಕೆ ಪಾಠದ ಪ್ರಸ್ತಾವನೆ ಯಲ್ಲಿ ಕೆಲವು ಮಾತುಗಳನ್ನು ವಿವರಿಸಬಹುದು ಯಾವ ಪ್ರಸಂಗದಲ್ಲಿ ಎಂದ ವ್ಯಕ್ತಿ ಹೇಗೆ ವರ್ತಿಸಿದಂಬ ದನ್ನು ವಿದ್ಯಾರ್ಥಿಗಳೇ ಅರಿತುಕೊಳ್ಳುತ್ತ ಭಾವ ಪ್ರವಾಹದಲ್ಲಿ ತೇಲಿ ಹೋಗುವಂತ ಇಂಥ ಪಾಠಗಳು ಸಾಗಬೇಕು. ಸಂದರ್ಭದಿಂದ ಕಠಿಣ ಶಬ್ದಗಳ ಅರ್ಥವನ್ನು ಊಹಿಸುವ ಶಕ್ತಿಯೂ ವಿದ್ಯಾರ್ಥಿಗಳಲ್ಲಿ ಈಗ ಬರುತ್ತ ಹೋಗಬೇಕು ಇದು ಅಖಂಡ ರೂಪದಲ್ಲಿ ಪಾಠ ಸಾಗಬೇಕು

ಇನ್ನು ಪಠ್ಯಪುಸ್ತಕಗಳಲ್ಲಿ ಬರುವ ಗದ್ಯಗಳೆಲ್ಲ ಸೂಕ್ಷ್ಮ ಅಭ್ಯಾಸಕ್ಕಾ ಗಿಯೇ ಇರುತ್ತವೆಂಬುದನ್ನು ನಾವು ತಿಳಿದುಕೊಳ್ಳಬೇಕು ಅದರೂ ಒಂದೇ ಗದ್ಯವನ್ನು ಹದಿಮೂರು ವರ್ಷ ವಯಸ್ಸಿನ ವಿದ್ಯಾರ್ಥಿಗೆ ಕಲಿಸುವುದು

ಬೇರೆ, ಹದಿನೆಂಟು ವರ್ಷದ ವಿದ್ಯಾರ್ಥಿಗೆ ಹೇಳಿಕೊಡುವುದು ಬೇರೆ. ಅದಕ್ಕಾಗಿ ಶಿಕ್ಷಕರು ಯಾವ ತರಗತಿಯ ವಿದ್ಯಾರ್ಥಿಗಳಿಗೆ ಬೋಧಿಸುವೆವೆಂಬುದನ್ನು ಗಮನದಲ್ಲಿ ಇಟ್ಟುಕೊಳ್ಳಬೇಕಾಗುವುದು. ಅದರಂತೆ ವಿವರಣದ ರೀತಿಯನ್ನು ಬದಲಿಸಿಕೊಳ್ಳಬೇಕು.

ಗದ್ಯದ ಮೊದಲ ವಾಚನವು ಸಾಮಾನ್ಯವಾಗಿ ಅರ್ಥ ತಿಳಿದುಕೊಳ್ಳುವದಕ್ಕಾಗಿ ಇರುತ್ತದೆ. ನಮ್ಮ ಶಾಲೆಗಳಲ್ಲಿ ಪಾಠಗಳು ಹೆಚ್ಚಾಗಿ ಪುರಾಣ ಪದ್ಧತಿಯಲ್ಲಿ ನಡೆಯುತ್ತವೆ. ಶಿಕ್ಷಕರು ಪುರಾಣಿಕರಂತೆ ಗದ್ಯವನ್ನು ಓದಿ ವಿವರಿಸುತ್ತ ಹೋಗುವುದು, ವಿದ್ಯಾರ್ಥಿಗಳು ಕೇಳುತ್ತ ಕೂಡುವುದು, ಕೊನೆಗೆ ಕೆಲವು ಪ್ರಶ್ನೆಗಳನ್ನು ಕೇಳಿ, ವಿದ್ಯಾರ್ಥಿಗಳಿಗೆ ವಿಷಯ ತಿಳಿಯಿತೆಂಬಲ್ಲಿಗೆ ಪಾಠ ಯಶಸ್ವಿಯಾದುದರ ಸಮಾಧಾನ ಹೊಂದಲಾಗುವುದು. ಇದು ಸರಿಯಾದ ಕ್ರಮವೆನಿಸದು. ಪಾಠಾಭ್ಯಾಸಕ್ಕೆ ಶಿಕ್ಷಕನ ಪೂರ್ವಸಿದ್ಧತೆಯಷ್ಟೇ ವಿದ್ಯಾರ್ಥಿಗಳ ಪೂರ್ವ ತಯಾರಿಗೂ ಮಹತ್ವವಿದೆ. ಶಾಲೆಯ ಒಂದು ಗಂಟೆಯ ಅವಧಿಯಲ್ಲಿ ಗದ್ಯದ ಭಾವವನ್ನು ತಿಳಿದುಕೊಳ್ಳುವದಕ್ಕಿಂತ ಹೆಚ್ಚಿನ ವಿಷಯವೇ ಸಾಗುವದಿಲ್ಲ. ಅದಕ್ಕಾಗಿ ವಿದ್ಯಾರ್ಥಿಗಳಿಗೆ ತಾವು ಕಲಿಯಬೇಕಾಗಿರುವ ಗದ್ಯ ಭಾಗವನ್ನು ಮನೆಯಲ್ಲಿ ಓದಿ ತರಲಿಕ್ಕೆ ಸೂಚಿಸಿರಬೇಕು. ಅದರಿಂದ ಅವರಿಗೆ ಪುಸ್ತಕದ ಕೊನೆಗಿರುವ ಕಠಿಣ ಶಬ್ದಗಳ ಕೋಶವನ್ನು ಉಪಯೋಗಿಸುವ ಅಭ್ಯಾಸವಾಗುತ್ತದೆ. ಸ್ವತಂತ್ರವಾಗಿ ಓದಿ ತಿಳಿದುಕೊಳ್ಳುವ ರೂಢಿಯೂ ಹೆಚ್ಚುತ್ತದೆ. ಮುಂದೆ ವರ್ಗದಲ್ಲಿ ಶಿಕ್ಷಕರು ಅದೇ ಗದ್ಯವನ್ನು ವಿವೇಚಿಸುವುದರಿಂದ ಆಗ ತಾವು ಮನೆಯಲ್ಲಿ ಯಾವುದನ್ನು ತಿಳಿದುಕೊಳ್ಳಲಿಲ್ಲ, ಹೇಗೆ ತಿಳಿದುಕೊಳ್ಳಬೇಕಿತ್ತು ? ಹೆಚ್ಚಿಗೆ ಏನು ತಿಳಿಯಿತು ? — ಇತ್ಯಾದಿಗಳ ಕಲ್ಪನೆಯು ವಿದ್ಯಾರ್ಥಿಗಳಿಗೆ ಬರುತ್ತದೆ. ಶಿಕ್ಷಕರು ಗದ್ಯ ಓದುವುದರಲ್ಲಿ ಹೋಗುವ ವೇಳೆಯೂ ಉಳಿಯುತ್ತದೆ. ಆದರೆ ಎಲ್ಲ ಪಾಠಗಳನ್ನೂ ಹೀಗೆಯೇ ಮಾಡಬೇಕೆಂದೇನೂ ಅಲ್ಲ. ಕೆಲವೊಂದು ಮಾದರಿಯ ವಾಚನವನ್ನೂ, ಲಲಿತ ವಾಙ್ಮಯ ಪಾಠವನ್ನೂ ವರ್ಗದಲ್ಲಿ ಶಿಕ್ಷಕರು ಅವಶ್ಯವಾಗಿ ಓದಬೇಕು. ಸಣ್ಣ ಕಥೆಯಂಥ ಪಾಠವನ್ನು ಒಂದು ದಿನ ಓದಿ, ಮರುದಿನ ವಿವೇಚಿಸಲೂ ಅಡ್ಡಿಯಿಲ್ಲ. ಚಿಕ್ಕಮಕ್ಕಳಿಗೆ ಪಾಠ ಹೇಳುವಾಗ — ಒಂದರಿಂದ ಮೂರನೆಯ ತರಗತಿಯ

ವರೆಗೆ — ಶಿಕ್ಷಕರು ಗದ್ಯವನ್ನು ಓದಿ ತೋರಿಸುವ ಅವಶ್ಯಕತೆ ಇರುತ್ತದೆ ಅಲ್ಲಿ ಶಿಕ್ಷಕರ ಮಾದರಿಯ ವಾಚನವು ಅತ್ಯವಶ್ಯವಾಗಿರಬೇಕು

ಪಠ್ಯಪುಸ್ತಕವೆಂದರೆ ಶಿಕ್ಷಕರ ಕೈಗೆ ಕೊಟ್ಟ ಸಾಮಾನ್ಯ ಒಂದು ಪುಸ್ತಕವಲ್ಲ ಅದರಿಂದ ಅದನ್ನು ಹೆಚ್ಚು ಕೌಶಲ್ಯಪೂರ್ಣವಾಗಿ ಉಪಯೋಗಿಸಿ, ಹೆಚ್ಚಿಗೆ ಹೆಚ್ಚು ಲಾಭವನ್ನು ವಿದ್ಯಾರ್ಥಿಗಳು ಪಡೆದುಕೊಳ್ಳುವಂತೆ ಮಾಡಬೇಕು ಅದಕ್ಕಾಗಿ ಮೇಲಿನ ತರಗತಿಗಳಲ್ಲಿ ಪಠ್ಯ ವಿಭಾಗದಲ್ಲಿ ಬರುವ ಎರಡು ಸಣ್ಣ ಕಥೆ, ಇಲ್ಲವೆ ವ್ಯಕ್ತಿ ಚಿತ್ರಗಳನ್ನು ತುಲನಾತ್ಮಕವಾಗಿ ಅಬ್ಯಾಸ ಮಾಡಲು ಸ ದಿಯನ್ನು ಒದಗಿಸಬೇಕು ಅದರಂತೆ ಬೇರೆ ಬೇರೆ ಲೇಖಕರ ದೃಷ್ಟಿಕೋಣ, ಶೈಲಿ, ವಿವರಣೆಯ ರೀತಿಗಳನ್ನೂ ತೌಲನಿಕವಾಗಿ ನೋಡುವ ಶಕ್ತಿಯನ್ನೂ ಮಕ್ಕಳಲ್ಲಿ ತಂದು ಕೊಡಬೇಕು ಈ ಶಕ್ತಿಯು ವಿದ್ಯಾರ್ಥಿಗಳಲ್ಲಿ ಬೆಳಯಬೇಕಾದರೆ ಪಾಠಗಳ ವಿವೇಚನೆಯ ಕಾಲಕ್ಕೆ ಕೇಳುವ ಪ್ರಶ್ನಗಳು ವಿದ್ಯಾರ್ಥಿಗಳಿಗೆ ವಿಚಾರ ಮಾಡಲಿಕ್ಕೆ ಹಚ್ಚುವಂಥವಿರಬೇಕು ಕೇವಲ ಪಾಠದ ಸಾರಾಂಶವನ್ನು ಕೇಳಿಕೊಳ್ಳುವ ರೀತಿಯಲ್ಲಿ ಪ್ರಶ್ನೋತ್ತರ ವರ್ಗದಲ್ಲಿ ಸಾಗಕೂಡದು.

ಗದ್ಯ ಶಿಕ್ಷಣದ ವಿಷಯಕ್ಕೆ ಇಷ್ಟು ಸಾಮಾನ್ಯವಾಗಿ ಕಲ್ಪನೆಯನ್ನು ಇಟ್ಟುಕೊಂಡು, ಪ್ರತ್ಯಕ್ಷ ಪಾಠಕೂಡುವ ಕ್ರಮವನ್ನು ಇನ್ನ ಸ್ಥೂಲವಾಗಿ ವಿವರಿಸಲಿಕ್ಕೆ ಅಡ್ಡಿಯಿಲ್ಲ ಯಾವ ತರಗತಿಗೆ ಪಾಠವನ್ನು ಕಲಿಸುವದಾದರೂ ಕೂಡ ಮುಖ್ಯವಾಗಿ ೧) ಪೀಠಿಕೆ ೨) ವಿವೇಚನ ೩) ಬುದ್ಧಿಮಾಪನಗಳೆಂದು ಮೂರು ಮೆಟ್ಟಲುಗಳಂತೂ ಆಗುತ್ತವೆ

ಪೀಠಿಕೆಯಲ್ಲಿ – ಪಾಠದ ವಿಷಯಕ್ಕ ಮಕ್ಕಳಲ್ಲಿ ಕುತೂಹಲವನ್ನು ಕೆರಳಿಸುವುದು, ಪೂರ್ವಜ್ಞಾನವನ್ನು ಜಾಗ್ರತಗೊಳಿಸುವುದು, ಮುಂದಿನ ಪಾಠಕ್ಕೆ ಬೇಕಾಗುವ ಸಾಮಗ್ರಿಯನ್ನು ಒದಗಿಸುವುದು, ಪಾಠದ ವಿಷಯಕ್ಕೆ ತಕ್ಕ ವಾತಾವರಣವನ್ನು ಕಲ್ಪಿಸುವುದು — ಇವೇ ಮೊದಲಾದ ಕಾರ್ಯಗಳು ನಡೆಯಬೇಕು ಇದಕ್ಕಾಗಿ ಹೊಸದಾಗಿ ಪಾಠವನ್ನು ಆರಂಭಿಸುವಾಗ ಲೇಖಕರ ಪರಿಚಯ, ಎಂಥ ಪ್ರಸಂಗದಲ್ಲಿ ಅವರು ಆ ಲೇಖನವನ್ನು ಬರೆದರು, ಅದರ ವೈಶಿಷ್ಟ್ಯವೇನು ಇತ್ಯಾದಿ ವಿಷಯಗಳಿಂದ ಪಾಠವನ್ನು ಆರಂಭಿಸಬಹುದು. ಕಲಿಸಿ ಉಳಿದ ಅರ್ಧಪಾಠವನ್ನು ಆರಂಭಿಸುವಾಗ

ಮೊದಲಿನ ಅರ್ಧ ಭಾಗದ ವಿಷಯವನ್ನು ವಿವೇಚಿಸಿ ಮುಂದೆ ಸಾಗಬಹುದು ಇವಲ್ಲದೆ ಇನ್ನೊಂದು ರೀತಿಯಲ್ಲಿಯೂ ಪಾಠದ ಪೀಠಿಕೆಯನ್ನು ಹಾಕಬಹುದು ನಾವು ಕಲಿಸಬೇಕಾದ ವಿಷಯವನ್ನು ಸಾಮ್ಯ ಗುಣದಿಂದಾಗಲಿ ವಿರೋಧ ಗುಣದಿಂದಾಗಲಿ ಪ್ರಚೋದಿಸುವಂಥ ಒಂದು ಪ್ರಸಂಗವನ್ನು ವಿವರಿಸಿ, ಪಾಠದ ಕಡೆಗೆ ಮಕ್ಕಳ ಮನಸ್ಸನ್ನು ಸೆಳೆಯುವುದು ಅವರ ಅವಧಾನವನ್ನು ಪಾಠದಲ್ಲಿ ನಿಲ್ಲಿಸುವುದು

(೨) ವಿವೇಚನೆಯಲ್ಲಿ ಮೊದಲು ಗದ್ಯಭಾಗದ ಸಾಮಾನ್ಯ ಕಲ್ಪನೆಯನ್ನು ತಂದು ಕೊಡುವುದು (ಅದರಲ್ಲಿ) ವಿದ್ಯಾರ್ಥಿಯು ಆ ಪಾಠದಲ್ಲಿ ಯಾವ ಸಂಗತಿಯನ್ನು ಮುಖ್ಯವಾಗಿ ಅರಿತುಕೊಳ್ಳಬೇಕೆಂಬುದನ್ನು ಸೂಚಿಸುವುದು ಪೂರ್ವಜ್ಞಾನಗಳನ್ನು ಅವಲಂಬಿಸಿ, ಸುಲಭದಿಂದ ಕಠಿಣದ ಕಡೆಗೆ ಸಾಗು, ತಿಳಿದುದದರಿಂದ ತಿಳಿಯದ್ದಕ್ಕೆ ಸಾಗು — ಎಂಬ ಶಿಕ್ಷಣ ತತ್ತ್ವಗಳನ್ನು ಅನುಸರಿಸಿ ಸುಲಭ ವಿಚಾರ, ಕಠಿಣ ಭಾಗ, ಸೂಕ್ಷ್ಮ ಅಭ್ಯಾಸಗಳ ವಿವೇಚನೆಯನ್ನು ಮಾಡುತ್ತ ಸಾಗಬೇಕು.

(೩) ಬುದ್ಧಿವಿಕಾಸನದಲ್ಲಿ: ಮಕ್ಕಳು ಕಲಿತ ಜ್ಞಾನವನ್ನು ಹೇಗೆ ಉಪಯೋಗಿಸಿಕೊಳ್ಳುವರೆಂಬುದನ್ನು ನೋಡುವದಿರುತ್ತದೆ ಸಂದರ್ಭಕ್ಕೆ ಹೊಂದಿಕೊಳ್ಳುವ — ಉಪಯೋಗಕ್ಕೆ ಬರುವ ಜ್ಞಾನಕ್ಕೇನೇ ಬುದ್ಧಿಶಕ್ತಿ ಎಂದು ಸಾಮಾನ್ಯವಾಗಿ ಹೇಳಬಹುದು ಆದರಿಂದ ವಿದ್ಯಾರ್ಥಿಗಳಿಗೆ ಹೊಸದಾಗಿ ಕಲಿತ ಶಬ್ದಗಳನ್ನು ಉಪಯೋಗಿಸಹಚ್ಚುವುದು ಪಾಠದಲ್ಲಿಯ ಜ್ಞಾನವನ್ನು ಆಧರಿಸಿ ಹೊಸಜ್ಞಾನ, ನವೀನ ಕಲ್ಪನೆಗಳನ್ನು ರೂಪಿಸಲು ಮಾರ್ಗದರ್ಶನ ಮಾಡುವುದು ಪಾಠದ ವಿಚಾರವನ್ನೂ ನೀತಿಬೋಧೆಯನ್ನೂ ವಿದ್ಯಾರ್ಥಿಗಳು ಅರಗಿಸಿಕೊಂಡದನ್ನು ತಿಳಿದುಕೊಳ್ಳುವುದು, ಮಕ್ಕಳ ಜೀವನದಲ್ಲಿರುವ ಅನುಭವಕ್ಕೂ ಪಾಠದ ಸಂಗತಿಗೂ ಇರುವ ಸಂಬಂಧವನ್ನು ವಿದ್ಯಾರ್ಥಿಗಳು ಅನುಭವಿಸಿದರೋ ಇಲ್ಲವೋ ಎಂಬುದನ್ನು ಅಳಿಯುವುದು, ಅದಕ್ಕೆ ನೆರವು ನೀಡುವುದು — ಇವೆಲ್ಲವುಗಳನ್ನು ಶಿಕ್ಷಕರು ಮನೋರಂಜಕ ರೀತಿಯಲ್ಲಿ ಪ್ರಶ್ನೆ ಹಾಕಿ, ವಿದ್ಯಾರ್ಥಿಗಳಿಂದ ಈ ಮೆಟ್ಟಲಿನಲ್ಲಿ ತಿಳಿದುಕೊಂಡು, ಪಾಠದ ಯಶಸ್ಸಿನ ಕಲ್ಪನೆಯನ್ನು ತಾವು ತಂದುಕೊಳ್ಳುವುದು ಇದರಿಂದ ಶಿಕ್ಷಕರಿಗೆ ಒಂದು ತರದ ಆನಂದವೂ ಆಗುತ್ತದೆ.

ಇನ್ನು ಈ ತ್ರಿಸೂತ್ರಗಳನ್ನು ಎದುರಿಗೆ ಇಟ್ಟುಕೊಂಡು, ಬೇರೆ ಬೇರೆ ವಯಸ್ಸಿನ ವಿದ್ಯಾರ್ಥಿಗಳಿಗೆ ಗದ್ಯ ಪಾಠವನ್ನು ಕಲಿಸುವಾಗ ಯಾವ ಯಾವ ಮೆಟ್ಟಲುಗಳಿಂದ ಶಿಕ್ಷಕರು ಸಾಗಬೇಕೆಂಬುದನ್ನು ವಿವೇಚಿಸೋಣ —

## ಪ್ರಾಥಮಿಕ ಶಾಲೆಯ ಕೆಳಗಿನ ತರಗತಿಗಳಲ್ಲಿ :

**(೧) ಪ್ರಸ್ತಾವನೆ** — ಗದ್ಯವಿಭಾಗಕ್ಕೆ ಅನುಸರಿಸಿದ ಚಿತ್ರವನ್ನು ಮಕ್ಕಳಿಗೆ ತೋರಿಸಿ, ಅದರ ಮೇಲಿನ ಪ್ರಶ್ನೆಗಳನ್ನು ಕೇಳುತ್ತ ಉದ್ದೇಶ ಕಥನಕ್ಕೆ ಬಂದು ಪ್ರಸ್ತಾವನೆಯನ್ನು ಮುಗಿಸಬಹುದು. ಇದರಲ್ಲಿ ಮುಂದೆ ಪಾಠದಲ್ಲಿ ಬರುವ ಕೆಲವು ಕಠಿಣ ಶಬ್ದಗಳ ಅರ್ಥ ಸ್ಪಷ್ಟವಾಗುವಂತೆ ಸಾಗಿದರೆ ಒಳ್ಳೆಯದು. ಅದೂ ಬುದ್ಧಿಪೂರ್ವಕವಾಗಿ, ಒಂದೊಂದೇ ಶಬ್ದವನ್ನು ಆಯ್ದು, ಅರ್ಥ ವಿವರಿಸಿದಂತೆ ಆಗಕೂಡದು. ಹಾಗೆ ಆದರೆ ಪ್ರಸ್ತಾವನೆಯ ಮುಖ್ಯ ಉದ್ದೇಶಕ್ಕೇನೇ ಬಾಧೆ ಬರುವದು. ಅರ್ಥ ವಿವರಣೆ ಸಹಜ ಸುಂದರವಾದದ್ದಾದರೆ ಮುಂದಿನ ವಾಚನದ ಕಾಲಕ್ಕೆ ಗದ್ಯಭಾಗದ ಅರ್ಥವು ಮಕ್ಕಳಿಗೆ ಸಹಜವಾಗಿ ಸ್ಫುರಿಸಲಿಕ್ಕೆ ಅನುಕೂಲವಾಗುವುದು. ಇನ್ನು ಪ್ರಸ್ತಾವನೆಯ ಆರಂಭವನ್ನು ಪ್ರಶ್ನೆಯಿಂದಲೇ ಮಾಡಕೂಡದು. ಶಿಕ್ಷಕರು ನಾಲ್ಕು ಮಾತುಗಳನ್ನು ಹೇಳಿ, ಮಕ್ಕಳ ಲಕ್ಷ್ಯವನ್ನು ಆಕರ್ಷಿಸಿಕೊಂಡು ಆಮೇಲೆ ಪ್ರಶ್ನೋತ್ತರ ರೂಪದಲ್ಲಿ ಮುಂದ ಸಾಗಬೇಕು. ಇದರಲ್ಲಿ ಪಾಠದ ಸಾರಾಂಶ ಬರದಂತೆ ಎಚ್ಚರ ವಹಿಸಬೇಕು. ಇಲ್ಲವಾದರೆ ಕಲಿಯುವ ಪಾಠದಲ್ಲಿ ಅನಾಸ್ಥೆ ಉತ್ಪನ್ನವಾಗುವುದು. ಒಂದೊಂದು ದಿನಕ್ಕೊ ಒಂದೊಂದು ಹೊಸ ಮಾದರಿಯಲ್ಲಿ ಪ್ರಸ್ತಾವನ ಆರಂಭವಾಗಿ ಉದ್ದೇಶ ಕಥನದೊಡನೆ ಮುಗಿಯಬೇಕು. ಇದೊಂದು ಶಿಕ್ಷಕರ ನಿಶ್ಚಿತ ಮಾರ್ಗವೆಂಬ ಕಲ್ಪನೆಯು ಮಕ್ಕಳಿಗೆ ಬರುವಂತೆ ಆಗಬಾರದು. ನವನವೀನ ಕಲ್ಪನೆ, ಕಲೆಗಳಿಂದ ಕೂಡಿರಬೇಕು.

**(೨) ಶಿಕ್ಷಕರ ವಾಚನ** — ಶಿಕ್ಷಕರು ವರ್ಗದ ಎದುರಿನಲ್ಲಿ ಗದ್ಯ ಭಾಗವನ್ನು ಓದಿ ತೋರಿಸುವ ಪೂರ್ವದಲ್ಲಿ ಒಂದೆರಡು ಕೇಂದ್ರ ಪ್ರಶ್ನೆಗಳನ್ನು ವಿದ್ಯಾರ್ಥಿಗಳಿಗೆ ಕೊಡಬೇಕು. 'ಕೇಂದ್ರ ಪ್ರಶ್ನೆ' ಎನ್ನುವುದರಲ್ಲಿ ಒಂದು ವಿಶಿಷ್ಟ ಉದ್ದೇಶವಿದೆ. ಅದು ಪಾಠದ ಕೇಂದ್ರ ವಿಷಯಕ್ಕೆ ಸಂಬಂಧಿ

ಸಿದ್ದು ಇರಬೇಕು, ಪಾಠದ ಮುಖ್ಯ ಉದ್ದೇಶವನ್ನು ಉತ್ತರವೆಂದು ಅಪೇಕ್ಷಿಸುವಂಥದಿರಬೇಕು. ತರುವಾಯ ಶಿಕ್ಷಕನು ಓದುವಾಗ, ಸ್ಪಷ್ಟ ಹಾಗೂ ಭಾವಪೂರ್ಣವಾಗಿ ಓದಬೇಕು ನಿಲ್ಲುವಲ್ಲಿ ನಿಂತು, ಧ್ವನಿ ತಗ್ಗಿಸಬೇಕಾದಲ್ಲಿ ತಗ್ಗಿಸಿ ಒದಲಿಸಬೇಕಾದಲ್ಲಿ ಒದಲಿಸಿ, ಪ್ರಶ್ನೆ ಉದ್ಗಾರಗಳೆಲ್ಲ ಸ್ಪಷ್ಟವಾಗುವಂತೆ ನಿದಾನವಾಗಿ ಓದಿ ತೋರಿಸಬೇಕು ಅದು ಆದರ್ಶವಾಚನವಾಗಿರಬೇಕು ಮಕ್ಕಳಿಗೆ ತಿಳಿಯುವಂತೆ ಇರಬೇಕು

(೩) ವಿವೇಚನೆ — ಮೊದಲು ಕೇಂದ್ರ ಪ್ರಶ್ನೆಗಳಿಗೆ ವಿದ್ಯಾರ್ಥಿಗಳಿಂದ ಉತ್ತರವನ್ನು ಸಂಪಾದಿಸಬೇಕು ಮಕ್ಕಳು ಕೊಟ್ಟ ಅಪೂರ್ಣ ಉತ್ತರಗಳನ್ನೆಲ್ಲ ಒಟ್ಟುಗೂಡಿಸಿ, ಬೇರೆ ಒಳ್ಳೆಯ ಭಾಷೆಯಲ್ಲಿ ಶಿಕ್ಷಕರು ಕೇಂದ್ರ ಪ್ರಶ್ನೆಗಳ ಉತ್ತರವನ್ನು ಹೇಳಬೇಕು ತರುವಾಯ ಪಾಠದ ವಿವೇಚನೆಗೆ ತೊಡಗಬೇಕು. ಆಗ ಮಕ್ಕಳು ಪುಸ್ತಕವನ್ನು ತೆರೆದಿಟ್ಟು, ಪಾಠದಲ್ಲಿ ದೃಷ್ಟಿಯನ್ನು ಆಡಿಸಿ, ಉತ್ತರಗಳನ್ನು ಹೇಳಲಿಕ್ಕೆ ಅಡ್ಡಿಯಿಲ್ಲ ಆದರೆ ಒಂದೊಂದೇ ವಾಕ್ಯ ತಿರುಗಿ ಶಿಕ್ಷಕರು ಓದುತ್ತ ವಿವೇಚನೆಯನ್ನು ನಾಗಿಸುವುದು ಹಿತಕರವಲ್ಲ ಇನ್ನು ವಿಶಿಷ್ಟ ಅರ್ಥವುಳ್ಳ ಮಾದರಿಯ ವಾಕ್ಯಗಳು ಪಾಠದಲ್ಲಿ ಇದ್ದರೆ ಅಂಥ ವಾಕ್ಯಗಳ ಭಾವ ಹೊರಹೊಮ್ಮುವ ಪ್ರಶ್ನೆಗಳನ್ನು ಮೊದಲು ಕೇಳಿ, ಉತ್ತರ ಪಡೆದು, ತರುವಾಯ ಆ ವಾಕ್ಯ ಓದಿ ಹೇಳುವುದು ಒಳ್ಳೆಯ ಕ್ರಮವಾಗಿದೆ ಹೀಗೆ ವಿವೇಚನೆ ಮಾಡುತ್ತ ಮುಂದರಿದಾಗ ಒಂದೊಂದು ವಾಕ್ಯ ವೃಂದವನ್ನು ಮುಗಿಸಿ, ಅದರ ಸಾರಾಂಶವನ್ನು ಒಂದೆರಡು ವಾಕ್ಯಗಳಲ್ಲಿ ಸೂಚಿಸಿ ಮುಂದೆ ಸಾಗಬೇಕು ವಿವೇಚನೆಯ ಹೃದಯದಂತಿರುವ ಪ್ರಶ್ನೆ ಕೇಳುವ ವಿಧಾನದಲ್ಲಿಯೂ ಒಂದು ಕಲೆಯಿದೆ. ಏಕೆ, ಏನು, ಹೇಗೆ, ಇತ್ಯಾದಿಯಾಗಿ ಪ್ರಶ್ನೆಗಳು ವಿಷಯದಿಂದ ವಿಷಯಕ್ಕೆ ಸರಪಳಿಯಂತೆ ಹೆಣಿಕೆಯನ್ನು ಹಾಕುತ್ತ ಹೋಗಬೇಕು ಮಕ್ಕಳ ಉತ್ತರಗಳಿಂದ ಒಂದು ಸಮಗ್ರವೂ ಸಂಪೂರ್ಣವೂ ಆದ ವಿಷಯವು ತಾನಾಗಿಯೇ ರೂಪುಗೊಳ್ಳಬೇಕು ಹಾಗೆ ಪ್ರಶ್ನೆಗಳ ಕಲಾತ್ಮಕ ಯೋಜನೆ ಇರಬೇಕು.

(೪) ಮಾದರಿ ವಾಚನ — ಇದನ್ನು ತೀರ ಕೆಳಗಿನ ತರಗತಿಯಲ್ಲಿ ಶಿಕ್ಷಕರು ಹೇಳಿ ಮಕ್ಕಳು ಅನ್ನುತ್ತ ಹೋಗಬೇಕು ಒಮ್ಮೊಮ್ಮೆ ಒಳ್ಳೆಯ ಹುಡುಗರಿಂದಲೂ ಹೇಳಿಸಬಹುದು ಹೊಸ ಮಾದರಿಯ ಉಚ್ಚಾರಗಳಿದ್ದ

ಶಬ್ದಗಳನ್ನು ತಿರುತಿರುಗಿ ಅನ್ನಿಸಿ, ಉಚ್ಚಾರ ತಿದ್ದಬೇಕು ಈ ಸಾಮೂಹಿಕ ವಾಚನದಿಂದ ಬಹಳ ಲಾಭವಿದೆ ಸರತಿಯಂತೆ ಮಕ್ಕಳು ವರ್ಗದ ಎದುರಿಗೆ ವ್ಯಾಖ್ಯಾನಕಾರನಂತೆ ಬಂದು ನಿಂತು, ಹೇಳುವುದರಿಂದ ಅವರ ಆತ್ಮಾವಿಷ್ಕಾರಕ್ಕೆ ಅವಕಾಶ ಸಿಕ್ಕುವುದು. ಇದರಿಂದ ವಿದ್ಯಾರ್ಥಿಗಳಲ್ಲಿ ಒಳ್ಳೆಯ ವಾಚನದ ಸ್ಪರ್ಧೆಯೂ ಆರಂಭವಾಗುವುದು ಆದರೆ ನಡು ನಡುವೆ ತಡೆದು ತಿದ್ದಲಿಕ್ಕೆ ಹೋಗಿ, ಅವರ ಉತ್ಸಾಹಭಂಗವನ್ನು ಶಿಕ್ಷಕರು ಮಾಡಬಾರದು ಒಬ್ಬ ವಿದ್ಯಾರ್ಥಿಯ ವಾಚನ ಮುಗಿದೊಡನೆ ಏನು ಹೇಳಬೇಕಾದುದನ್ನು ಹೇಳಿ, ತಿದ್ದಬೇಕಾದ ಉಚ್ಚಾರಗಳನ್ನು ತಿದ್ದಿ ತೀರಿಸಬಹುದು

(ಞ) ಪುನರವಲೋಕನ — ಇದನ್ನು ವಿವಿಧ ರೀತಿಯಲ್ಲಿ ಶಿಕ್ಷಕರು ಮಾಡಬಹುದು ಮಕ್ಕಳಿಗ ವಿಷಯಜ್ಞಾನವು ಎಷ್ಟಾಗಿದೆ ಎಂಬುದನ್ನು ನೋಡುವದಿರುತ್ತದೆ ಭಾಷಾವಿಷಯದ ಪಾಠಗಳಲ್ಲಿ ಇಂಥ ಸಾರಾಂಶ ಪ್ರಶ್ನೆಗಳಿಗೆ ಎಷ್ಟು ಮಹತ್ವವಿಲ್ಲ ಅವರು ಕಲಿತ ಭಾಷೆಯ ಮೇಲೆ ಎಷ್ಟು ಮಟ್ಟಿಗೆ ಪ್ರಭುತ್ವ ಸಂಪಾದಿಸಿದರೆಂಬುದನ್ನು ನೋಡುವದು ಉಚಿತವಾಗಿದೆ ಅದಕ್ಕಾಗಿ ಪಾಠದೊಳಗಿನ ವಿಶಿಷ್ಟ ಶಬ್ದಗಳನ್ನು ಉಪಯೋಗಿಸಿ ವಾಕ್ಯ ರಚಿಸುವುದು, ಅಪೂರ್ಣ ವಾಕ್ಯಗಳನ್ನು ಪೂರ್ಣಗೊಳಿಸುವುದು, ವಾಕ್ಯದಲ್ಲಿ ಬಿಟ್ಟ ಪದಗಳನ್ನು ತುಂಬುವುದು, ವಿರೋಧ ಅರ್ಥವುಳ್ಳ ಶಬ್ದಗಳನ್ನು ಹೇಳುವುದು—ಇತ್ಯಾದಿ ರೂಪಗಳಲ್ಲಿ ಪುನರವಲೋಕನವು ಒಂದು ಆಟದಂತೆ ಮನೋರಂಜಕವಾಗಿ ಸಾಗಬೇಕು

(ಟ) ಗೃಹಪಾಠ — ತೀರ ಚಿಕ್ಕಮಕ್ಕಳಿಗಂತೂ ಗೃಹಪಾಠ ಕೊಡಬಾರದು ಆದರೆ ಎರಡನಯ ಮೂರನೆಯ ತರಗತಿಗಳಲ್ಲಿ ಕಲಿತ ಪಾಠದಿಂದ ಸುಲಭವಾಗಿ ಮಾಡಿಕೊಂಡು ಬರುವಂಥ ಕೆಲಸ ಒಪ್ಪಿಸಬೇಕು. ಅದೂ ಬಹಳ ವೇಳೆ ಹಿಡಿಯುವಂಥದು ಇರಕೂಡದು

## ಪ್ರಾಥಮಿಕ ಶಾಲೆಯ ಮೇಲಿನ ವರ್ಗಗಳಲ್ಲಿ.

ಪ್ರಾಥಮಿಕ ಶಾಲೆಗಳ ಮೇಲಿನ ವರ್ಗಗಳೆಂದರೆ ಮಾಧ್ಯಮಿಕ ಶಾಲೆಗಳ ಕೆಳಗಿನ ವರ್ಗಗಳೆಂದು ಇಲ್ಲಿ ತಿಳಿದುಕೊಳ್ಳಬೇಕು ಇವರ ಗದ್ಯ ಶಿಕ್ಷಣ ಕ್ರಮವು ಹೆಚ್ಚು ವಿವೇಚನಾ ಪೂರ್ಣವಾಗಿಯೂ ವ್ಯಾಕರಣ ಮಿಶ್ರಿತ

ವಾಗಿಯೂ ಆಳವಾಗಿಯೂ ನಾಗಬೇಕು. ಇಲ್ಲಿಯ ವಿದ್ಯಾರ್ಥಿಗಳ ಮನೋವೃತ್ತಿ, ಒಲವುಗಳು ಬೇರೆಯಾಗಿರುತ್ತವೆ ಅವುಗಳನ್ನು ನೆನೆದು ಪಾಠದ ಮೆಟ್ಟುಗಳನ್ನು ಹೀಗೆ ಮಾಡಿಕೊಳ್ಳುವುದು ಉಚಿತವಾಗಿದೆ –

(೧) ಪ್ರಸ್ತಾವನೆ – ಪಾಠದೊಳಗಿನ ವಿಷಯಕ್ಕೆ ಸಂಬಂಧಿಸಿದ ಚರ್ಚೆಯಿಂದ ಪ್ರಸ್ತಾವನೆಯು ಆರಂಭವಾಗಬೇಕು ಆದರೆ ಪಾಠದ ವಿಷಯವನ್ನು ವಿವರಿಸುವಂತೆ ಇರಕೂಡದು ಈ ಚರ್ಚೆಯಿಂದ ಪಾಠದ ವಿಷಯಕ್ಕೆ ಕುತೂಹಲವು ಕೆರಳುವಂತೆ ಮಾತ್ರ ಇರಬೇಕು ಇನ್ನು ಈ ವಯಸ್ಸಿನ ವಿದ್ಯಾರ್ಥಿಗಳಲ್ಲಿ ಸಂದರ್ಭದ ಮೇಲಿಂದ ಶಬ್ದದ ಅರ್ಥವನ್ನು ಅರಿಯುವ ಶಕ್ತಿಯು ಬರುತ್ತ ಹೋಗಬೇಕು ಅದರಿಂದ ಕರೀ ಹಲಗೆಯ ಮೇಲೆ ಕಠಿಣ ಪದಗಳ ಅರ್ಥವನ್ನು ಮೊದಲೇ ಬರೆದು ಇಡುವ ಅವಶ್ಯಕತೆಯಿಲ್ಲ ಆದರೆ ಅವುಗಳನ್ನು ವಿವೇಚನೆಯಲ್ಲಿ ವಿವರಿಸುತ್ತ ಹೋಗಬೇಕು ಯಾವ ವರ್ಗದಲ್ಲೂ ಕೂಡ ಶಬ್ದಕ್ಕೆ ಪ್ರತಿ ಶಬ್ದ ಕೊಡುವುದರಿಂದ ಮಕ್ಕಳಿಗೆ ಅರ್ಥ ವಿವರಿಸಿದಂತಾಯಿತೆಂದು ತಿಳಿಯುವುದು ತಪ್ಪು ಆ ಅರ್ಥದ ಸ್ಪಷ್ಟ ಕಲ್ಪನೆಯು ಮಕ್ಕಳಿಗೆ ಆಗುವಂತೆ ಉದಾಹರಣೆ, ವಿವರಣೆ, ಅನುಭವ ಕಥನಗಳಿಂದ ವಿವರಿಸಬೇಕಾಗುವುದು. ಅದನ್ನೇ ಇಲ್ಲಿಯೂ ಅನುಸರಿಸಬೇಕು ಆಮೇಲೆ ಅವಶ್ಯಕ ಕೇಂದ್ರ ಪ್ರಶ್ನೆಗಳನ್ನು ಮಕ್ಕಳಿಗೆ ಕೊಟ್ಟು, ಮೌನವಾಚನಕ್ಕೆ ಅವಕಾಶ ಕೊಡಬೇಕು.

(೨) ಮೌನವಾಚನ – ಈ ತರಗತಿಗಳಿಗೆ ಸಾಮಾನ್ಯವಾಗಿ ಗದ್ಯ ಭಾಗವನ್ನು ಮನಸ್ಸಿನಲ್ಲಿ ಓದಿಕೊಳ್ಳಲಿಕ್ಕೆ ಹೇಳಬಹುದಾದರೂ ನಾಟಕದ ಭಾಗ, ನಾಟ್ಯಚ್ಛಟಾ, ಆವೇಶಯುಕ್ತ ಭಾಷಣದ ಭಾಗ, ಏಕಪಾತ್ರಾಭಿನಯ ಮೊದಲಾದ ಗದ್ಯ ವಿಭಾಗಗಳಿದ್ದರೆ ಸ್ವತಃ ಶಿಕ್ಷಕರು ಅಭಿನಯ ಪೂರ್ವಕವಾಗಿ ಓದಿ ತೋರಿಸುವುದು ಉತ್ತಮ ಆ ವೇಳೆಗೆ ಮಕ್ಕಳು ಪುಸ್ತಕದಲ್ಲಿ ನೋಡುತ್ತ ಶಿಕ್ಷಕರ ಕಡೆಗೆ ಗಮನವಿಟ್ಟಿರಬೇಕು ಇನ್ನು ಸಾಮಾನ್ಯ ಗದ್ಯವನ್ನು ಮೌನವಾಗಿ ಓದಿಕೊಳ್ಳಲಿಕ್ಕೆ ಹೇಳಿದಾಗ ಶಿಕ್ಷಕರು ವರ್ಗದಲ್ಲಿ ತಿರುಗಾಡಿ, ಮಕ್ಕಳಿಗೆ ಕಠಿಣ ಶಬ್ದಗಳ ಅರ್ಥ, ಉಚ್ಚಾರ ತಿಳಿಯದ ಶಬ್ದಗಳನ್ನು ಉಚ್ಚರಿಸುವ ಕ್ರಮಗಳನ್ನು ವ್ಯಕ್ತಿಶಃ ತಿಳಿಸಿ, ಮಾರ್ಗದರ್ಶನ

ಮಾಡುವುದು ಶಿಕ್ಷಕನು ತಾನೇ ಓದುವಂಥ ಪಾಠವಿರಲಿ, ಮೌನವಾಚನಕ್ಕೆ ಕೊಟ್ಟಿರಲಿ, ಕೇಂದ್ರ ಪ್ರಶ್ನೆಗಳನ್ನು ಕೊಡಲೇ ಬೇಕು ಅವುಗಳು ಬಹಳ ಕುತಲತೆಯಿಂದ ತಗದವು ಇರಬೇಕು ಒಂದು ಶಬ್ದ, ಇಲ್ಲವೆ ವಾಕ್ಯದಲ್ಲಿ ಉತ್ತರ ಹೇಳಿ ಮುಗಿಸಲಿಕ್ಕೆ ಬರುವಂಥವು ಇರಬಾರದು. ವಿಸ್ತಾರವಾದ ಉತ್ತರವನ್ನು ಅವು ಅಪೇಕ್ಷಿಸಬೇಕು ಅಲ್ಲದೆ ಪಾಠದ ಮುಖ್ಯ ಹೇತುವಿನ ಕಡೆಗೆ ಆ ಪ್ರಶ್ನೆಗಳು ವಿದ್ಯಾರ್ಥಿಗಳ ಮನಸ್ಸನ್ನು ಸೆಳೆಯುವಂದವು ಇರಬೇಕು.

(೩) ವಿವೇಚನೆ – ಅಭ್ಯಾಸಕ್ಕೆ ಇಟ್ಟುಕೊಂಡ ಗದ್ಯದ ಒಂದೊಂದು ಪರಿಚ್ಛೇದವನ್ನು ಎತ್ತಿಕೊಂಡು, ಅದರಲ್ಲಿಯ ಮುಖ್ಯ ವಿಚಾರದ ಸುತ್ತಲೂ ವಿವಿಧ ಪ್ರಶ್ನೆಗಳನ್ನು ಕೇಳಿ, ಅದನ್ನು ವಿದ್ಯಾರ್ಥಿಗಳಿಂದ ಸ್ಪಷ್ಟಪಡಿಸುವುದು ವಿದ್ಯಾರ್ಥಿಗಳೇ ಹೆಚ್ಚಾಗಿ ಭಾಗವಹಿಸಬೇಕು ಅಂದರೆ ಚರ್ಚೆ ಸಾರ್ಥಕ ವಾಗುವುದು. ಕೆಲವೊಂದು ವಿಶಿಷ್ಟ ಅರ್ಥಗರ್ಭಿತ ವಾಕ್ಯಗಳನ್ನು, ಕಠಿಣ ವಿಚಾರಗಳನ್ನು ಮಾತ್ರ ಶಿಕ್ಷಕರು ಸ್ಪಷ್ಟಪಡಿಸಬೇಕು ಪರಿಚ್ಛೇದದ ಸಾರಾಂಶವನ್ನು ಒಂದೆರಡು ಮಾತುಗಳಲ್ಲಿ ಸ್ಪಷ್ಟಪಡಿಸಿ ಮುಂದೆ ಸಾಗ ಬೇಕು ಅಲ್ಲಲ್ಲಿ ವರ್ಗಕ್ಕೆ ತಕ್ಕಷ್ಟು ಭಾಷಾ ವೈಶಿಷ್ಟ್ಯ, ಶಬ್ದದ ವ್ಯಂಜಕತೆ, ವ್ಯಂಗ್ಯಾರ್ಥಗಳನ್ನು ಸ್ಪಷ್ಟಪಡಿಸುತ್ತ ಹೋಗಬೇಕು

(೪) ಮಾದರಿ ವಾಚನ – ಶಿಕ್ಷಕರು ಮೊದಲು ಮಾದರಿಯ ವಾಚನವನ್ನು ಆರಂಭಿಸಿ, ಆಮೇಲೆ ಒಳ್ಳೆಯ ವಿದ್ಯಾರ್ಥಿಗಳಿಂದಲೂ ಓದಿಸ ಬೇಕು ಚೆನ್ನಾಗಿ ಓದುವಂತೆ ಸ್ಪರ್ಧೆಯನ್ನು ಏರ್ಪಡಿಸಿದಂತೆ ಈ ಪ್ರಸಂಗವು ಸಾಗಬೇಕು

(೫) ಪುನರವಲೋಕನ – ಮೊದಲು ಒಂದರಡು ಸಾಮಾನ್ಯ ಪ್ರಶ್ನೆ ಗಳನ್ನು ಕೇಳಿ, ಪಾಠದ ಭಾವವನ್ನು ಹೊರಡಿಸಿಕೊಳ್ಳಬೇಕು ಆಮೇಲೆ ಸೂಕ್ಷ್ಮ ವಿಚಾರಗಳತ್ತ ಸಾಗಬೇಕು ಮಕ್ಕಳು ಕಲಿತ ಪಾಠದ ವಿಷಯವನ್ನೇ ಉತ್ತರಿಸಬೇಕಾದರೂ ವಿಚಾರ ಮಾಡಿ ಉತ್ತರ ಕೊಡುವಂತೆ ಪ್ರಶ್ನೆಗಳಿರ ಬೇಕು ಲೇಖನದೊಳಗಿನ ವಿಚಾರದ ಮೆಟ್ಟುಗಳನ್ನು ಹುಡುಕಿ ಹೇಳಲಿಕ್ಕೆ ಸೂಚಿಸಬಹುದು

(೬) ಗೃಹಪಾಠ - ಪಾಠದೊಳಗಿನ ವೈಚಾರಿಕ ಮಟ್ಟುಗಳನ್ನು ಶೋಧಿಸಿ ಬರೆದು ತರುವುದು ಪರಿಚ್ಛೇದಗಳಿಗೆ ಸ್ವತಂತ್ರ ತಲೆಬರಹಗಳನ್ನು ಕೊಡುವುದು. ಗದ್ಯವಿಭಾಗವನ್ನು ಸಂಗ್ರಹಿಸಿ ತರುವುದು. ಕೊಟ್ಟ ಪ್ರಶ್ನೆಗಳಿಗೆ ಗದ್ಯವನ್ನು ಓದಿ ಉತ್ತರ ಬರೆದು ತರುವುದು — ಇವೇ ಮೊದಲಾದ ರೀತಿಗಳಲ್ಲಿ ಮನೆಗೆ ಕೆಲಸವನ್ನು ಕೊಡಬಹುದು

## ಪುನರಾವೃತ್ತಿ ಪಾಠಗಳು :

ಪ್ರಾಥಮಿಕ ಶಾಲೆಯಲ್ಲಿ ಯಾವ ತರಗತಿಯನ್ನು ತಕ್ಕೊಂಡರೂ ಭಾಷಾವಿಷಯದಲ್ಲಿ ಪಾಠಗಳ ಪುನರಾವೃತ್ತಿಯ ಅವಶ್ಯಕತೆಯು ಇದ್ದೇ ಇದೆ ಆಗ ಮುಂದಿನ ಮೇಲಿನ ವರ್ಗಗಳಿಗೆಲ್ಲ ಪಾಠವನ್ನು ಮನಸ್ಸಿನಲ್ಲಿ ಓದಲಿಕ್ಕೆ ಹೇಳುವುದು ಅದಕ್ಕೆ ಕೆಳಗಿನ ತರಗತಿಯಲ್ಲಿ ಶಿಕ್ಷಕರು ಹೇಳಿ ಓದಿಸುವುದು ಸಾಮಾನ್ಯವಾಗಿ ಪಾಠದ ವಿಷಯಕ್ಕೆ ಕೆಲವು ಪ್ರಶ್ನೆಗಳನ್ನು ಕೇಳುವುದು ಕೆಲ ಶಬ್ದಗಳನ್ನು ಮಕ್ಕಳಿಗೆ ತಮ್ಮ ವಾಕ್ಯದಲ್ಲಿ ಪ್ರಯೋಗಿಸ ಹಚ್ಚುವುದು ಶಬ್ದಗಳ ವಿರೋಧ ಅರ್ಥಗಳುಳ್ಳ ಶಬ್ದಗಳನ್ನು ಕಂಡು ಹಿಡಿಯಲಿಕ್ಕೆ ಹೇಳುವುದು. ಅಲ್ಲದೆ ಈ ಪುನರಾವೃತ್ತಿಯ ಕಾಲಕ್ಕೆ ಮುಖ್ಯವಾಗಿ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ಪಾಠದ ಒಂದೊಂದು ಪರಿಚ್ಛೇದವನ್ನು ಓದಿಸಿಕೊಳ್ಳುವುದು, ಅದರ ಸಾರಾಂಶವನ್ನು ಕೇಳಿಕೊಳ್ಳುವುದು. — ಇದು ನಡೆಯಬೇಕು

ಇದೇ ಕಾಲಕ್ಕೆ ಪಾಠಗಳು ಸಂವಾದ ರೂಪದಲ್ಲಿ ಇದ್ದರೆ ಮಕ್ಕಳಿಂದ ಸಂಭಾಷಣೆಯನ್ನು ಮಾಡಿಸಿಕೊಳ್ಳಬಹುದು. ಉಪದೇಶಯುಕ್ತ ಗದ್ಯಗಳನ್ನು ಪಾಠಮಾಡಲಿಕ್ಕೂ ಹೇಳಬಹುದು ಇನ್ನು ವಿವಿಧ ರೀತಿಯಿಂದ ಭಾಷೆಯ ಅಭ್ಯಾಸ ಚೆನ್ನಾಗಿ ಸಾಗುವಂತೆ ಮಾಡಬಹುದು ಅದು ಆಯಾ ಶಿಕ್ಷಕರ ಕಲ್ಪಕತೆ, ಉತ್ಸಾಹಗಳನ್ನು ಅವಲಂಬಿಸಿದೆ

## ಮಾಧ್ಯಮಿಕ ಶಾಲೆಯ ಮೇಲಿನ ವರ್ಗಗಳಲ್ಲಿ

(೧) ಪ್ರಸ್ತಾವನೆ —ವಿದ್ಯಾರ್ಥಿಗಳು ಪ್ರೌಢರೂ ವಿಚಾರಶೀಲರೂ ಆಗಿರುವುದರಿಂದ ಲೇಖಕರ ಪರಿಚಯ ಹಾಗು ಆ ಪಾಠವನ್ನು ಯಾವ

ಗ್ರಂಥದಿಂದ ಆಯ್ದುಕೊಳ್ಳಲಾಗಿದೆಯೋ ಆ ಗ್ರಂಥದ ಸ್ವರೂಪ, ಅದಕ್ಕೆ ಸಾಹಿತ್ಯಕ್ಷೇತ್ರದಲ್ಲಿರುವ ಸ್ಥಾನಮಾನಗಳ ವಿವರಣೆಯಿಂದ ಪ್ರಸ್ತಾವನೆಯನ್ನು ರೂಪುಗೊಳಿಸಬೇಕು ಹಿಂದಿನ ಕಾಲದ ಲೇಖಕನಾಗಿದ್ದರೆ ಅವನ ಕಾಲ, ಆಗಿನ ಸನ್ನಿವೇಶ, ಅದರಿಂದ ಅವನ ಗ್ರಂಥದ ಮೇಲೆ ಆದ ಪ್ರಭಾವವನ್ನು ವಿವರಿಸಿ ಪಾಠದ ವಿಷಯಕ್ಕೆ ಬರಬೇಕು ಇವರಿಗೆ ಪ್ರಸ್ತಾವನೆಯನ್ನು ತುಲನಾತ್ಮಕ ಅಭ್ಯಾಸದಿಂದಲೂ ಪ್ರಶ್ನೋತ್ತರ ರೂಪದಲ್ಲಿ ಮಾಡಬಹುದು

(೨) ವಿವೇಚನೆ — ಸಾಮಾನ್ಯವಾಗಿ ಗದ್ಯಭಾಗಗಳನ್ನು ಪ್ರೌಢ ವಿದ್ಯಾರ್ಥಿಗಳಿಗೆ ಮನೆಯಲ್ಲಿ ಓದಿಕೊಂಡು ಬರಲಿಕ್ಕೆ ಕೊಟ್ಟಿರಬೇಕು ಅದ ರಿಂದ ವಿವೇಚನೆಗೇನೇ ತೊಡಗಬಹುದು ಈ ವಿವೇಚನೆಯ ಆರಂಭದಲ್ಲಿ, ಸಾರಾಂಶ ರೂಪದ ಉತ್ತರ ಹೊರಡುವಂಥ ಪ್ರಶ್ನೆಗಳಿಂದ ಮೊದಲು ಮಾಡ ಬೇಕು ಅದರಿಂದ ಅವರು ಮನೆಯಲ್ಲಿ ಓದಿಕೊಂಡು ಬಂದುದರ ಕಲ್ಪನೆ ಆಗುವುದು. ವಿದ್ಯಾರ್ಥಿಗಳ ಉತ್ತರವನ್ನು ಸ್ವೀಕರಿಸಿ, ಅದರ ಎಳೆಯನ್ನೇ ಹಿಡಿದು, ಏಕೆ ? ಏನು ? ಹೇಗೆ ? ಇತ್ಯಾದಿ ಪ್ರಶ್ನೆಗಳಿಂದ ಶಕ್ಯವಿದ್ದಷ್ಟು ವಿಷಯದ ಅಂತರಂಗಕ್ಕೆ ಅವರನ್ನು ಒಯ್ಯಬೇಕು. ಮುಂದ ಅವರ ಮಾಲಿಯು ಕುಂಠಿತವಾದಲ್ಲಿ, ಶಿಕ್ಷಕನು ಮಾರ್ಗದರ್ಶನ ಮಾಡಿ, ಸೂಕ್ಷ್ಮ ಅಭ್ಯಾಸಕ್ಕೆ ಪ್ರೋತ್ಸಾಹಿಸಬೇಕು ವಾಕ್ ಪ್ರಚಾರ, ಪದೆನುಡಿ, ಭಾಷಾ ಸೌಷ್ಠವಗಳನ್ನು ವಿವರಿಸಬೇಕು । ಭಾಷೆಯ ವ್ಯಂಜಕತೆ ಮಾರ್ಮಿಕತೆ ಗಳನ್ನು ತಿಳಿದುಕೊಳ್ಳುವಂತೆ ಮಾಡಬೇಕು ಲೇಖಕರ ಉದ್ದೇಶವನ್ನು ವಿದ್ಯಾರ್ಥಿಗಳಲ್ಲಿ ಪರಿಣಾಮಕರವಾಗಿ ಬಿಂಬಿಸಬೇಕು.

(೩) ಮಾದರಿ ವಾಚನ — ಶಿಕ್ಷಕರು ವಿಶಿಷ್ಟ ಪಾಠಗಳ ಕೆಲವು ಗದ್ಯ ಭಾಗವನ್ನು ಮಾದರಿಗೆಂದು ಓದಿ ತೋರಿಸಬಹುದು ವಿದ್ಯಾರ್ಥಿಗಳಿಗೆ ಅದರಂತೆ ಓದಲಿಕ್ಕೆ ವರ್ಗದಲ್ಲಿ ಹೇಳುವುದು. ಸ್ವರಗಳ ಏರಿಳಿವು, ಹಾವ-ಭಾವಗಳಿಗೆ ಪ್ರೋತ್ಸಾಹ ಕೊಡುವುದು.

(೪) ಅವಲೋಕನ – ಇದು ಸಿಂಹಾವಲೋಕನದ ಸ್ವರೂಪದಲ್ಲಿ ಆರಂಭವಾಗಬೇಕು ಆಮೇಲೆ ವಿಷಯವನ್ನು ವಿವಿಧ ಪಾರ್ಶ್ವಗಳಿಂದ ಅವಲೋಕಿಸುವುದು. ಅನೇಕ ದೃಷ್ಟಿಕೋಣಗಳಿಂದ ಮಂಡಿಸುವುದು.

ನಾಡನುಡಿಗಳ ಅರ್ಥವನ್ನು ವಿಸ್ತರಿಸುವುದು ಇಡೀ ಒಂದು ನುಡಿಕಟ್ಟಿನ ಅರ್ಥವನ್ನು ಒಂದೇ ಶಬ್ದದಿಂದ ಸೂಚಿಸುವುದು ವಿಚಾರದ ಬೇರೆ ಬೇರೆ ಪಾರ್ಶ್ವಗಳನ್ನು ವಿಂಗಡಿಸಿ, ಸಾಧಕ ಬಾಧಕತೆಗಳನ್ನು ಚರ್ಚಿಸುವುದು ಭಾವನಾತ್ಮಕ ಗದ್ಯಗಳಿದ್ದಲ್ಲಿ ಪಾತ್ರಪೋಷಣೆ, ಸನ್ನಿವೇಶ ರಚನೆಗಳ ಕುರಿತು ವಿಚಾರಿಸುವುದು ವ್ಯಾಕರಣ, ಶಬ್ದ ಉತ್ಪತ್ತಿಗಳನ್ನು ವಿವರಿಸುವುದರ ಕಡೆಗೆ ಗಮನಕೊಡುವುದು. ಯಾವಾಗಲೂ ಮಕ್ಕಳು ಕಲಿತ ಗದ್ಯ ಪಾಠವನ್ನೇ ವ್ಯಾಕರಣ ಶಿಕ್ಷಣಕ್ಕೆ ಆಯ್ದುಕೊಳ್ಳುವುದು ಉಚಿತವೆಂಬುದನ್ನು ಗಮನಿಸಿ ಇಲ್ಲಿ ವಿಷಯವನ್ನು ಅವಲೋಕಿಸಬೇಕು

(೫) ಗೃಹಪಾಠ — ಗದ್ಯಪಾಠವನ್ನು ಅನುಕೂಲವಿದ್ದರೆ ಸಂವಾದಕ್ಕೆ ಪರಿವರ್ತಿಸಲು ಪ್ರೋತ್ಸಾಹಿಸುವುದು. ವಿಷಯವನ್ನು ನಿಬಂಧಕ್ಕೆ ಆಯ್ದು ಅಳವಡಿಸಲು ಹೇಳುವುದು ಪತ್ರ, ದಿನಚರಿಗಳ ರೂಪಕ್ಕೆ ತಿರುಗಿಸಿ ಬರೆಯಲಿಕ್ಕೆ ಹೇಳುವುದು ಪಾಠದ ವಿಷಯಕ್ಕೆ ಪೂರಕವಾಗಿರುವ ಲೇಖನ, ಪುಸ್ತಕಗಳನ್ನು ಓದಲಿಕ್ಕೆ ಸೂಚಿಸುವುದು

ಈ ತರಗತಿಗೆ ಬಂದ ವಿದ್ಯಾರ್ಥಿಗಳು ಸ್ವತಂತ್ರವಾಗಿ ಓದಿಕೊಂಡು, ಮಾತೃಭಾಷೆಯೊಳಗಿನ ಗ್ರಂಥಗಳ ರಸಾಸ್ವಾದವನ್ನು ಮಾಡಿಕೊಳ್ಳುವ ಅವಸ್ಥೆಗೆ ಬಂದು ನಿಂತಿರಬೇಕು ಸೂಕ್ಷ್ಮ ಅಭ್ಯಾಸಕ್ಕಷ್ಟು ಶಿಕ್ಷಕರ ಮಾರ್ಗದರ್ಶನ ಪಡೆದು, ಮುಂದರಿಯುವ ವೃತ್ತಿ ಅವರಲ್ಲಿ ಬೆಳೆಯಬೇಕು ಅದಕ್ಕೆ ಪೋಷಕವಾಗುವಂತೆ ಶಿಕ್ಷಕರ ಮಾರ್ಗದರ್ಶನ ವ್ಯಕ್ತಿತ್ವಗಳು ಇರಬೇಕು ಅಂದರೆ ಯೋಗ್ಯ ದಿಸೆಯಲ್ಲಿ ವಿದ್ಯಾರ್ಥಿಗಳ ಭಾಷಾಭ್ಯಾಸ ಸಾಗುವುದು ಅವರ ವ್ಯಕ್ತಿತ್ವ ವಿಕಾಸವಾಗುವುದು



## ೭. ಕವಿತಾ ಶಿಕ್ಷಣ

ಪರೀಕ್ಷೆಗೆ ಪದ್ಯವಿಭಾಗ ಇರುವುದೆಂದೇ ಕವಿತೆಗಳನ್ನು ಕಲಿಯು ವುದು- ಎಂಬ ಭಾವವು ಶಾಲೆಗಳಲ್ಲಿ ಬೆಳೆಯುತ್ತ ಬಂದಿದೆ. ಇಂದಿನ ವೈಜ್ಞಾನಿಕ ಯುಗದಲ್ಲಿ, ವಿಚಾರ ಕ್ರಾಂತಿಯು ನಡೆದಿರುವಾಗ ಈ ಕವಿತಾ ಶಿಕ್ಷಣದಿಂದ ಜೀವನಕ್ಕೆ ಉಪಯೋಗವೇನಿದೆ ? - ಎಂದು ಕೇಳುವವರೂ ಕಡಿಮೆಯಿಲ್ಲ ಕಲವು ಜನ ಹಿರಿಯ ಶಿಕ್ಷಕರು ಕವಿತಾ ಶಿಕ್ಷಣದಿಂದ ಮಕ್ಕಳ ಶಬ್ದ ಸಂಪತ್ತು ಹೆಚ್ಚುವುದು, ಉಚ್ಚಾರ ಶುದ್ಧಗೊಳ್ಳುವುದು, ಪಾಠ ಮಾಡಿಸುವುದರಿಂದ ಸ್ಮರಣ ಶಕ್ತಿಯು ಬೆಳೆಯುವದು- ಇವೆ ಮೊದ ಲಾದ ಸಮಾಧಾನಗಳನ್ನು ಕೊಡುವರು ಯಾರು ಏನೇ ಹೇಳಿದರೂ ಇಂದು ಗದ್ಯ ಗ್ರಂಥಗಳನ್ನು ಓದುವದಕ್ಕಿಂತ ಪದ್ಯಗಳನ್ನು ಓದುವ ಜನರೂ ವಿದ್ಯಾರ್ಥಿಗಳೂ ತೀರ ಕಡಿಮೆಯೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ

ಹಳೆಯ ಶಿಕ್ಷಣ ಪದ್ಧತಿಯಲ್ಲಿ ಪ್ರತಿಯೊಂದು ಕವಿತಯ ಪದಚ್ಛೇದ, ಅನ್ವಯ, ಅನ್ವಯಾರ್ಥ, ಭಾವಾರ್ಥ, ಸಂಧಿ, ಸಮಾಸ, ಅಲಂಕಾರ ಇವೇ ಮೊದಲಾದ ಮೆಟ್ಟಲುಗಳಿಂದ ಕವಿತಾ ಶಿಕ್ಷಣವು ಸಾಗುತ್ತಿದ್ದಿತು ಪ್ರತಿಯೊಂದು ಶಬ್ದವನ್ನೂ ಅದರ ಅಕ್ಷರಗಳನ್ನೂ ಬಿಂಗಡಿಸಿ, ಅರ್ಥದ ಉತ್ಪತ್ತಿ ಹಚ್ಚುವುದರಲ್ಲಿ ಶಿಕ್ಷಕರು ತಮ್ಮ ಕೌಶಲ್ಯವನ್ನು ಪ್ರದರ್ಶಿಸುತ್ತಿ ದ್ದರು. ತಮ್ಮ ವಿದ್ವತ್ತಿಗೆ ತಕ್ಕಂತೆ ಕವಿತಾ ಶಿಕ್ಷಣದ ಉದ್ದೇಶವನ್ನೂ ಹೇಳುತ್ತಿದ್ದರು ಇದರಿಂದ ಕವಿತಾ ಶಿಕ್ಷಣವೆಂದರ ಜನಸಾಮಾನ್ಯರಿಗೆ ಬೇಸರ ಉಂಟಾಯಿತು ಆದರೂ ಕೆಲವು ಹಳಯ ಪದ್ಯಗಳು ನೀತಿ ಯನ್ನು ಬೋಧಿಸುತ್ತಿದ್ದವು ಅದಕ್ಕಾಗಿ ಅವು ಮಕ್ಕಳಿಗೆ ಪಾಠವಾಗಿರು ವುದು ಉತ್ತಮ ಈಗಿನ ಕವನಗಳಲ್ಲಿ ಅದೂ ಇಲ್ಲ ಸುಮ್ಮನ ಕವನ ಗಳ ಅಭ್ಯಾಸದಲ್ಲಿ ಮಕ್ಕಳ ಶಕ್ತಿಯನ್ನು ಅಪವ್ಯಯ ಗೊಳಿಸಲಾಗುವುದು- ಎಂದು ಪಾಲಕರು ಗುಣುಗುಟ್ಟುವರು ಇವೆಲ್ಲಕ್ಕೆ ಕವಿತೆಯ ಶಿಕ್ಷಣ ಸರಿ ಯಾಗಿ ಸಾಗದಿದ್ದುದಕ್ಕೆ, ಜನಸಾಮಾನ್ಯರಲ್ಲಿ ಪಸರಿಸಿದ ತಪ್ಪು ಕಲ್ಪನೆಗಳೇ ಕಾರಣವೆಂದು ಮೊದಲಿಗೇನೇ ಸ್ಪಷ್ಟವಾಗಿ ಹೇಳದೆ ಗತಿಯಿಲ್ಲ

ವ್ಯಕ್ತಿತ್ವ ವಿಕಾಸವು ಶಿಕ್ಷಣದ ಗುರಿಯೆಂಬುದನ್ನು ಈಗ ಯಾರೂ ಅಲ್ಲಗಳೆಯುವಂತಿಲ್ಲ ವ್ಯಕ್ತಿತ್ವವೆಂಬುದರಲ್ಲಿ ಬುದ್ಧಿ, ವಿಚಾರಗಳಿಗೆಷ್ಟು ಸ್ಥಾನವೋ ಅಷ್ಟೇ ಭಾವನೆಗೂ ಮಹತ್ವವಿದೆ. ಇವು ಮೂರೂ ಸರಿಯಾಗಿ ವಿಕಾಸ ಹೊಂದಿದಾಗಲೇ ವ್ಯಕ್ತಿತ್ವ ವಿಕಾಸ ಹೊಂದುವುದು. ಇಷ್ಟೇ ಅಲ್ಲ, ಭಾವಜೀವಿಯಾಗದ ವ್ಯಕ್ತಿಯಿಂದ ಸಮಾಜಕ್ಕೂ ರಾಷ್ಟ್ರಕ್ಕೂ ಯಾವ ಹಿತವೂ ಆಗದು ಮನುಷ್ಯ ಸಹೃದಯಿ ಯಾಗುವುದು, ಮಾನವನಾಗುವುದು ಬುದ್ಧಿ ಕುಶಲತೆಯಿಂದಲ್ಲ, ವಿಚಾರ ಪ್ರವಣತೆಯಿಂದಲ್ಲ, ಭಾವನೆಯಿಂದ ಈ ಭಾವನೆಯೆಂಬ ಜೀವನದ ಮೂಲ ಶಕ್ತಿಯನ್ನು ಸಮತೋಲದಲ್ಲಿ ಇಟ್ಟು, ವ್ಯವಹಾರದಲ್ಲಿ ಅದನ್ನು ಒಳಸುವಂತೆ ಮಾಡುವುದು ಬುದ್ಧಿಶಕ್ತಿಯು ಭಾವ, ಬುದ್ಧಿಗಳೆರಡೂ ಮಾನವ ಜೀವನದ ವೈಶಿಷ್ಟ್ಯಗಳಾಗಿವೆ ಬುದ್ಧಿಯು ಬೆಳೆದು, ಭಾವದ ಸ್ಥಾನವನ್ನು ಆಕ್ರಮಿಸಿದರೆ ಅದು ತನ್ನ ಜೀವಾಳವನ್ನೇ ಕಳೆದುಕೊಂಡಂತೆ ಆಗುವುದು ಇಂಥ ಅಮೂಲ್ಯವಾದ ಭಾವಶಕ್ತಿಯನ್ನು ಕಾವ್ಯವು ಪೋಷಿಸುವುದು, ಸಂರಕ್ಷಿಸುವುದು, ಬೆಳೆಯಿಸುವುದು. ಈ ಮಾತನ್ನು ಮೊದಲು ಶಿಕ್ಷಕರೂ ಸಾಮಾಜಿಕರೂ ತಿಳಿದುಕೊಳ್ಳಬೇಕಾಗಿದೆ •

ಇನ್ನು ಕಾವ್ಯವೊಂದು ಸಂತತ ಹರಿಯುವ ಆನಂದದ ಪ್ರವಾಹವು. ಈ ಆನಂದವು ವಿಷಯಾನಂದದಂತಲ್ಲ ಕಾವ್ಯಾನಂದವು ಬ್ರಹ್ಮಾನಂದದಂತೆ ಎಂದೂ ಹೇಳುವರು ಇಂಥ ಆನಂದವು ಯಾರಿಗೆ ಬೇಡ ? ಆದರೆ ಈ ಆನಂದವು ಕಾವ್ಯಶಿಕ್ಷಣದ ಧ್ಯೇಯವೆಂದು ಇಲ್ಲಿ ಹೇಳಬರುವದಿಲ್ಲ. ಅಂದರೂ ಕಾವ್ಯ, ಹಾಡು, ಪದ್ಯಗಳು ಎಂಥವರನ್ನೂ ಕ್ಷಣ ಹೊತ್ತು ಮೈಮರೆಯಿಸುವವೆಂಬುದೇನೂ ಸುಳ್ಳಲ್ಲ. ಕಾವ್ಯವು ಕವಿಯ ಕಲ್ಪನಾಲೋಕಕ್ಕೆ ನಮ್ಮನ್ನು ಕರೆದು ಒಯ್ಯುವುದು. ಮಕ್ಕಳಂತೂ, ಕಲ್ಪನಾಜೀವಿಗಳು ಅವರಿಗಂತೂ ಕಾವ್ಯವು ಸಹಜವಾಗಿ ರುಚಿಸುವುದು ಹಳ್ಳಿ ಹಳ್ಳಿಗಳಿಗೆ ಚಲಚಿತ್ರಗಳಲ್ಲಿಯ ಪದ್ಯಗಳನ್ನು ಹಾಡುತ್ತ ತಿರಗುವ ಮಕ್ಕಳನ್ನು ಓಣಿ ಓಣಿಗಳಲ್ಲಿ ಕಾಣುತ್ತೇವೆ ಅವುಗಳಲ್ಲಿ ಅವರ ನಾದಪ್ರಿಯತೆಯು ಸ್ಫುಟಗೊಳ್ಳುವುದು ಈ ನಾದ ಮಾಧುರ್ಯದಿಂದ ಕಾವ್ಯ ಪ್ರಾಕಾರದ ಹೆಬ್ಬಾಗಿಲಲ್ಲಿ ಮಕ್ಕಳೂ ಹಿರಿಯರೂ ಪ್ರೀತಿಯಿಂದ ಪ್ರವೇಶಿಸುವರು.

ಮುಂದೆ ಒಳಗಿನ ಅರಮನೆಯ ಸೌಂದರ್ಯಕ್ಕೆ ಮುಗ್ಧರಾಗುವರು ಈ ಮುಗ್ಧತೆಯು ವಯಸ್ಸು ಹೋದವರಲ್ಲೂ ಮಕ್ಕಳ ಮನೋವೃತ್ತಿಯನ್ನುಂಟು ಮಾಡುವುದು ಮಾನವನು ಸಂಸಾರದ ಚಿಂತೆ, ಆತಂಕಗಳನ್ನೆಲ್ಲ ಮರೆತು ಮಕ್ಕಳಂತೆ ಒಂದು ಕ್ಷಣ ಸ್ವರ್ಗೀಯ ಸಂತಸದ ಸುಖವನ್ನು ಅನುಭವಿಸುತ್ತ ಕಲ್ಪನಾಲೋಕದಲ್ಲಿ ವಿಶ್ರಮಿಸುವುದು ಕಾವ್ಯ ಮಾತೆಯ ಮಡಿಲಲ್ಲಿಯೇ ಸಾಧ್ಯವಿದೆ.

ಇದಲ್ಲದೆ ಕಾವ್ಯವು ಉಚ್ಚ ಅಭಿರುಚಿಗಳ ಪೋಷಕವಾಗಿದೆ ಉಚ್ಚ ಅಭಿರುಚಿಯೊಂದು ಸಂಸ್ಕೃತಿಯ ಲಕ್ಷಣವು ಸೌಂದರ್ಯದ ಅನುಭವ, ಕಲೆಯ ಭವ್ಯತೆಯ ಕಲ್ಪನೆಗಳೆಲ್ಲ ಕಾವ್ಯದ ಮುಖಾಂತರ ಮನುಷ್ಯನಿಗೆ ಆಗುತ್ತವೆ ತಾರುಣ್ಯದ ಹೊಸ್ತಿಲಲ್ಲಿ ಕಾಲಿಡುತ್ತಿರುವ ವಿದ್ಯಾರ್ಥಿಗಳ ಮನಸ್ಸು ಸಂವೇದನಕ್ಷಮವಿರುತ್ತದೆ ಸುತ್ತಲಿನವರ ಸುಖ-ದುಃಖಗಳಲ್ಲಿ ಬೇಗನೇ ಸಮರಸವಾಗುವ ಶಕ್ತಿಯು ಆಗ ಬಹು ಜಾಗೃತವಿರುತ್ತದೆ. ಮುಂದೆ ಪ್ರಾಪಂಚಿಕ ಅನುಬವದಿಂದ ಈ ಸಂವೇದನೆ, ಸಹಾನುಭವಗಳ ತೀಕ್ಷ್ಣತೆಯು ಕಡಿಮೆಯಾಗುವುದು ಇದು ತೀರ ಬತ್ತಿಹೋಗಿ, ಅವನ ಹೃದಯವೊಂದು ಪಾಷಾಣವಾಗದಂತೆ ಕಾವ್ಯವು ನೋಡಿಕೊಳ್ಳುವುದು ಕಾವ್ಯರಸದಿಂದ ಸತತವಾಗಿ ಹೃದಯವನ್ನು ಮೃದುವಾಗಿ ಇಡುವುದು ಆದರಿಂದ ಅವನನ್ನು ರಸಿಕನನ್ನಾಗಿ ಮಾಡುವುದು ಕಾವ್ಯ ರಸಿಕನು ಯಾವಾಗಲೂ ಆನಂದವೃತ್ತಿಯವನಾಗಿರುವನಲ್ಲದೆ ಸಹಾನುಭವದಿಂದ ಜನತ್ತಿಗೆ ಉಪಕಾರಿಯಾಗಿಯೂ ಇರುವನು

ಇಂಥವರನ್ನು ಶಾಲೆಯ ಕವಿತಾ ಶಿಕ್ಷಣವು ನಾಡಿಗೆ ಒದಗಿಸಬೇಕಾ ಗಿದೆ, ರಸಿಕರನ್ನು ನಿರ್ಮಿಸಬೇಕಾಗಿದೆ ಅದಕ್ಕಾಗಿ ಕವಿತಾ ಶಿಕ್ಷಣವು ಯೋಗ್ಯ ರೀತಿಯಿಂದ ಸಾಗಬೇಕು ಅದಕ್ಕೆ ಯೋಗ್ಯ ಶಿಕ್ಷಕ ಹಾಗು ಯೋಗ್ಯ ಕವನಗಳ ಆಯ್ಕೆಯು ತೀರ ಅವಶ್ಯಕವಿದೆ ಶಿಕ್ಷಕನು ಸ್ವತ ಕಾವ್ಯ ರಸಿಕನಾಗಿ, ಕವನದ ಹೃದಯವನ್ನು ತಿಳಿದುಕೊಂಡು, ವಿದ್ಯಾರ್ಥಿ ಗಳ ಮುಂದೆ ತೆರೆದಿಡಲು ಸಮರ್ಥನಾದವನು ಇರಬೇಕು ಶಿಕ್ಷಕನ್ನು ಸಮರಸವಾಗಿ ಕವಿತೆಯನ್ನು ಬೋಧಿಸಬೇಕು ಕವಿಯ ಭಾವವು ಅವನ ದಾಗಬೇಕು. ಅವನ ಧ್ವನಿ, ಮುಖಭಾವ ಎಲ್ಲವೂ ಕವನದ ಭಾವವನ್ನು

ವ್ಯಕ್ತಪಡಿಸುತ್ತಿರಬೇಕು ಅಂದರೆ ಕಾವ್ಯದ ಭಾವವು ಮಕ್ಕಳ ಹೃದಯಕ್ಕೆ ಹೋಗಿ ತಲುಪುವುದು ಭಾವವೆಂಬುದು ಸಾಹಚರ್ಯದಿಂದ ಹುಟ್ಟಿ ಬಂಥದು ಅದು ಕಾವ್ಯದಿಂದ ಶಿಕ್ಷಕನಲ್ಲಿಯೇ ಒಡಮೂಡದಿದ್ದರೆ ವಿದ್ಯಾರ್ಥಿಗಳಿಗೆ ಪರಿಣಾಮವಾಡುವುದು ಹೇಗ? ರಸಿಕ ಶಿಕ್ಷಕರು ಹೇಳಿದ ಕವನದ ಅಭ್ಯಾಸವು ವಿದ್ಯಾರ್ಥಿಗಳಿಗೆ ಇಡೀ ಜೀವನವೆಲ್ಲ ನೆನಪು ಉಳಿಯುವುದು

ಇನ್ನು ಕವನಗಳ ಆಯ್ಕೆಯ ವಿಷಯ ಈ ಮೊದಲು ಮಕ್ಕಳ ಮನೋವೃತ್ತಿಯನ್ನು ಗಮನಿಸಿ ಪಾಠಗಳನ್ನು ಆಯ್ದುಕೊಳ್ಳಬೇಕೆಂದು ಸೂಚಿಸಿದೆ ಚಿಕ್ಕಮಕ್ಕಳು ಕಲ್ಪನಾ ಜೀವಿಗಳು, ನಾದಪ್ರಿಯರು ಅದರಿಂದ ಅವರಿಗೆ ಅಂಥ ಸುಲಭ ಶಿಶುಗೀತಗಳನ್ನೇ ಅಭ್ಯಾಸಕ್ಕೆ ಕೊಡಬೇಕು. ಅಭಿನಯ ಗೀತಗಳೂ ಅವರಿಗೆ ಸೇರುವವು ಆಮೇಲೆ ವಿದ್ಯಾರ್ಥಿಗಳು ವಯಸ್ಸಿನಿಂದ ಬೆಳೆಯುತ್ತ ಹೋದಂತೆ ಅವರ ಮನೋವೃತ್ತಿಯೂ ಭಾಷಾ ಜ್ಞಾನವೂ ಭಿನ್ನ ಭಿನ್ನವಾಗುತ್ತ ಹೋಗುವವು ಅದಕ್ಕನುಗುಣವಾಗಿ ಕವಿತೆಗಳನ್ನು ಕಲಿಸಲಿಕ್ಕೆ ಆರಿಸಬೇಕು ಪಠ್ಯಪುಸ್ತಕದೊಳಗಿನ ಎಲ್ಲ ಕವಿತೆಗಳು ಮಕ್ಕಳಿಗೆ ನೇರುವವೆಂದು ಹೇಳಲಿಕ್ಕೆ ಒರುವದಿಲ್ಲ ಅವು ಗಳಲ್ಲಿ ತಕ್ಕಷ್ಟು ಒಳ್ಳೆಯವುಗಳನ್ನು ಆಯ್ದುಕೊಂಡು, ಅವಶ್ಯಕತೆಗೆ ಅನು ಸರಿಸಿ ಶಿಕ್ಷಕರು ಹೇಳಿಕೊಡಬೇಕು ಆಮೇಲೆ ಶಿಕ್ಷಕರು ಸ್ವಂತ ವಿವಿಧ ಪದ್ಯಗಳನ್ನು ಸಂಗ್ರಹಿಸಿ ಮಕ್ಕಳಿಗೆ ಕಲಿಸಬೇಕು ಹಳಗಾಲದ ಕಾವ್ಯಗಳ ಭಾಗಗಳನ್ನು ಕಳಗಿನ ತರಗತಿಗಳಲ್ಲಿ ಹೇಳಿಕೊಡುವುದು ಸಯುಕ್ತಿಕವೆನಿಸುವದಿಲ್ಲ. ಮಾಧ್ಯಮಿಕ ಶಾಲೆಗಳಲ್ಲಿ ನಮ್ಮ ಪ್ರಾಚೀನ ವಾಙ್ಮಯದ ರಸಸ್ಥಾನಗಳ ಕಲ್ಪನೆಯು ಬರುವಂತೆ ಕೆಲವು ಕವಿತೆಗಳನ್ನು ಹೇಳಿಕೊಡಬಹುದು

ಕಾವ್ಯ ಶಿಕ್ಷಣದ ಒಗ್ಗೆ ಇಷ್ಟು ಸ್ಥೂಲ ಕಲ್ಪನೆಯನ್ನು ಇಟ್ಟುಕೊಂಡು, ಕವಿತಾ ಪಾಠಗಳ ಒಗ್ಗೆ ಕೆಲವು ವಿಚಾರಗಳನ್ನು ಇಲ್ಲಿ ಕೊಡಲಾಗುವುದು

## ಪ್ರಾಥಮಿಕ ಶಾಲೆಗಳ ಕೆಳಗಿನ ವರ್ಗಗಳಲ್ಲಿ:

ಮೊದಲನೆಯ ತರಗತಿಯಲ್ಲಂತೂ ಅಭಿನಯ ಗೀತಗಳೂ ಶಿಶುಗೀತ ಗಳೂ ಅನ್ನುವುದಕ್ಕೆ ಮಾತ್ರ ಇರಬೇಕು. ಅವುಗಳನ್ನು ತಾಳ-ಲಯದ ಗುಂಟ

ಅನ್ನುವುದರಲ್ಲಿಯೇ ಮಕ್ಕಳಿಗೆ ಆನಂದ ಅವರ ಅರ್ಥದ ಗೊಡವೆಗೆ ಹೋಗ ಬಾರದು ಮುಂದೆ ಎರಡನೆಯ ಮೂರನೆಯ ತರಗತಿಗಳಲ್ಲಿ ವರ್ಣನಾತ್ಮಕ ವಾದ ಚಿಕ್ಕ ಚಿಕ್ಕ ಪದ್ಯಗಳು ಕಲಿಯುವುದಕ್ಕೆ ಇರುವುದು ಉಚಿತ. ಅಲ್ಲಿಯೂ ಸಹ ಶಬ್ದಾರ್ಥ, ಚರಣದ ಅರ್ಥ ಏನೆಂದು ಕೇಳಿ, ಮಕ್ಕಳ ಉತ್ಸಾಹವನ್ನು ಕುಂಠಿತಗೊಳಿಸಬಾರದು ಚೆನ್ನಾಗಿ ಹಾಡಿ ನಲಿಯುವುದಕ್ಕೆ ಅವಕಾಶ ಕೊಡಬೇಕು ಇವರಿಗೆ ನಾದ ಮಾಧುರ್ಯವು ಹೆಚ್ಚಾಗಿರುವ ಕವನಗಳನ್ನೇ ಕಲಿಸಲು ಆರಿಸಿಕೊಳ್ಳಬೇಕು ಸಾಮಾನ್ಯವಾಗಿ ಕವಿತೆಯ ಭಾವದ ಕಡೆಗೆ ಅವರ ಲಕ್ಷ್ಯ ಹೋಗುವಂತೆ ಮಾಡಬೇಕು

ಈ ದೃಷ್ಟಿಯಿಂದ ಕೆಳಗಿನ ತರಗತಿಗಳಲ್ಲಿ ಕವಿತಾ ಪಾಠದ ರೂಪ ರೇಷೆಯು ಹೀಗೆ ಆಗುವುದು

(೧) ಪ್ರಸ್ತಾವನೆ — ನಿಜವಾಗಿಯೂ ಈ ವರ್ಗಗಳಲ್ಲಿ ಕವಿತೆಯ ಬಗ್ಗೆ ಪೀಠಿಕೆಯನ್ನು ಹೇಳದೇನೇ ಒಮ್ಮೆಲೆ ಶಿಕ್ಷಕರು ಕವನ ಅಂದು ತೋರಿಸುವುದು ಒಳ್ಳೆಯ ಪದ್ಧತಿಯಾಗಿದೆ ಆದರ ಕೆಲವೊಂದು ಪದ್ಯಗಳಿಗೆ ಚಿತ್ರದ ಮುಖಾಂತರ ಚಿಕ್ಕ ಪ್ರಸ್ತಾವನೆಯನ್ನು ಮಾಡಬಹುದು ಅದರಲ್ಲಿ ಕವಿತೆಯಲ್ಲಿ ಬರುವ, ಮಕ್ಕಳಿಗೆ ತಿಳಿಯದ ಶಬ್ದಗಳ ಅರ್ಥವು ಸಂದರ್ಭಾನು ಸಾರ ಬಂದು ಹೋಗಿರಬೇಕು ಆದರೆ ಅದರಲ್ಲಿ ಕವಿತೆಯ ಭಾವವು ಸಮಾವೇಶವಾಗಿರಬಾರದು ಕವನದ ಭಾವಕ್ಕೆ ಹಿನ್ನೆಲೆಯಾಗುವಂಥ ಕಾಲ್ಪನಿಕ ಕಥೆಯೊಂದನ್ನು ಕಟ್ಟಿ ಹೇಳಿಯೂ ಪ್ರಸ್ತಾವನೆಯನ್ನು ಚತುರ ಶಿಕ್ಷಕರು ಮಾಡಿಕೊಳ್ಳಬಹುದು.

(೨) ಶಿಕ್ಷಕರ ಕಾವ್ಯ ಗಾಯನ — ಶಿಕ್ಷಕರು ಒಂದೆರಡು ಸಲ ಹಾವಭಾವ ಯುಕ್ತವಾಗಿ ಕವಿತೆಯನ್ನು ಅಂದು ತೋರಿಸಬೇಕು. ಕವನದ ಮುಖ್ಯ ಚಿತ್ರ ಮಕ್ಕಳ ಮನಸ್ಸಿನ ಮೇಲೆ ಮೂಡುವಂತೆ ಈ ಹಾಡುವಿಕೆ ಇರ ಬೇಕು ಈಗ ಪೂರ್ಣ ಕವನವನ್ನೇ ಶಿಕ್ಷಕರು ಅನ್ನುವುದು ಯೋಗ್ಯ ವಾದುದು ಅದಕ್ಕೆ ಯೋಗ್ಯವಾಗುವಂಥ ಚಿಕ್ಕ ಚಿಕ್ಕ ಕವಿತೆಗಳನ್ನೇ ಕಲಿಸ ಲಿಕ್ಕೆ ಆರಿಸಿಕೊಳ್ಳುವುದು ಎಂಥ ಸಂದರ್ಭದಲ್ಲೂ ಕವನವನ್ನು ತುಂಡು

ಗಡಿದು ಕಾವ್ಯಗಾಯನ ಮಾಡುವ ಗೊಡವೆಗೆ ಹೋಗಬಾರದು. ಕವನದ ಅಖಂಡತ್ವದಲ್ಲಿಯೇ ಅದರ ಭಾವ ಸೃಷ್ಟಿಯು ಇರುವುದು

(೩) ವಿವೇಚನೆ –ಶಿಕ್ಷಕರು ಕಾವ್ಯಗಾಯನ ಮಾಡುವಾಗ ಮಕ್ಕಳು ಪುಸ್ತಕದಲ್ಲಿ ನೋಡಿ, ಆ ಪದ್ಯವನ್ನು ಗುಣಗುಣಿಸುತ್ತಿರಬಹುದು ಸಾಮಾನ್ಯ ವಾಗಿ ಕೇಂದ್ರ ಪ್ರಶ್ನೆಯೊಂದನ್ನೂ ಮಕ್ಕಳಿಗೆ ಕೊಟ್ಟರೆ ತಪ್ಪಾಗಲಿಕ್ಕಿಲ್ಲ. ಅದರ ಉತ್ತರವು ಶಿಕ್ಷಕರ ಕಾವ್ಯ ಗಾಯನದಿಂದ ಮಕ್ಕಳ ಮನಸ್ಸಿಗೆ ಸ್ಫುರಿಸುವಂತೆ ಆಗಬೇಕು. ವಿವೇಚನೆಯ ಆರಂಭದಲ್ಲಿ ಕೇಂದ್ರ ಭಾವ ವನ್ನು ವಿವಿಧ ಪ್ರಶ್ನೆಗಳಿಂದ ಮಕ್ಕಳಿಂದ ಹೊರಡಿಸಿಕೊಳ್ಳಬೇಕು ಅವರ ಭಾವ ಸೃಷ್ಟಿಯ ಮುಕ್ಕು-ಮುರುಕುಗಳನ್ನು ತುಂಬಿಕೊಳ್ಳುತ್ತ ವಿವೇಚನೆ ಯನ್ನು ಸ್ವಲ್ಪದರಲ್ಲಿ ಸ್ವಾರಸ್ಯವಾಗಿ ಮುಗಿಸಬೇಕು

(೪) ಸಾಮೂಹಿಕ ಕಾವ್ಯಗಾಯನ – ವಿವೇಚನೆಯ ತರುವಾಯ ಮತ್ತೊಮ್ಮೆ ಶಿಕ್ಷಕರು ಕವಿತೆ ಅನ್ನಬೇಕು. ಈಗ ಮಕ್ಕಳು ಗುರುಗಳನ್ನು ಅನುಸರಿಸಿ ಅನ್ನಬೇಕು ಇದೇ ಮೆಟ್ಟಿಲಿನಲ್ಲಿ ವಿದ್ಯಾರ್ಥಿಗಳು ಸಾಮೂಹಿಕ ವಾಗಿ ಕವಿತೆ ಅನ್ನುವುದು ವರ್ಗದಲ್ಲಿಯ ಒಂದಿಬ್ಬರು ವಿದ್ಯಾರ್ಥಿಗಳು ವೈಯಕ್ತಿಕವಾಗಿಯೂ ಕವನವನ್ನು ಅಂದು ತೋರಿಸಬಹುದು

(೫) ಪುನರವಲೋಕನ :- ಕವನದ ಬಗ್ಗೆ ಸಾಮಾನ್ಯವಾಗಿ ಒಂದೆ ರಡು ಪ್ರಶ್ನೆಗಳನ್ನು ಕೇಳಿಕೊಳ್ಳುವುದು ಮಕ್ಕಳ ಮನಸ್ಸಿನ ಮೇಲೆ ಕವನದ ಭಾವ ಚಿತ್ರ ಹೇಗೆ ಮೂಡಿದೆ ಎಂಬುದನ್ನು ಇಲ್ಲಿ ಶಿಕ್ಷಕರು ನಿರೀಕ್ಷಿಸುವುದು ಕವಿತಾ ಶಿಕ್ಷಣದ ಯಶಸ್ಸಿನ ಪರೀಕ್ಷೆಯು ಇಲ್ಲಿಯೇ ಆಗುವುದು ಆದರೆ ಚಿಕ್ಕಮಕ್ಕಳಿಗೆ ವಿಮರ್ಶಾತ್ಮಕ ಪ್ರಶ್ನೆಗಳನ್ನು ಹಾಕಿ, ಶಿಕ್ಷಕರು ಹಾಸ್ಯಾಸ್ಪದ ರಾಗಬಾರದು

(೬) ಗೃಹಪಾಠ :- ಮನೆಯಲ್ಲಿ ತಾಯ್ತಂದೆಯರಿಗೆ ಕವಿತೆ ಅಂದು ತೋರಿಸಲಿಕ್ಕೆ ಹೇಳುವುದು ಪಾಠಮಾಡಿ ತರಲಿಕ್ಕೂ ಸೂಚಿಸಬಹುದು

## ಪ್ರಾಥಮಿಕ ಶಾಲೆಗಳ ಮೇಲಿನ ವರ್ಗಗಳಲ್ಲಿ:

ಈ ವರ್ಗಗಳು ಈಗ ಮಾಧ್ಯಮಿಕ ಶಾಲೆಯ ಕೆಳಗಿನ ವರ್ಗಗಳೆಂದು ತಿಳಿದುಕೊಳ್ಳಬೇಕು. ಪ್ರಾಥಮಿಕ ಶಾಲೆಯ ಈ ವರ್ಗಗಳ ಕವಿತಾ

ಶಿಕ್ಷಣಕ್ಕೂ ಮಾಧ್ಯಮಿಕ ಶಾಲೆಗಳಲ್ಲಿಯ ಕವಿತಾ ಶಿಕ್ಷಣಕ್ಕೂ ಏನೂ ವ್ಯತ್ಯಾಸವಾಗುವದಿಲ್ಲ

(೧) ಪ್ರಸ್ತಾವನೆ :- ಇಲ್ಲಿ ಮೊದಲು ಕವಿತೆಯ ಸ್ವರೂಪಕ್ಕೆ ಅನುಸರಿಸಿ ಪ್ರಸ್ತಾವನೆಯು ವಿವಿಧ ಮಾದರಿಯದಾಗುವುದೆಂಬುದನ್ನು ಹೇಳಿಬಿಡಬೇಕು ಅನೇಕ ಹೊಸ ಭಾವಗೀತೆಗಳು ಕವಿಯ ಜೀವನದೊಳಗಿನ ಒಂದೊಂದು ಪ್ರಸಂಗಕ್ಕೆ ಸಂಬಂಧಿಸಿದವು ಇರುತ್ತವೆ ಆಗ ಕವಿಯ ಪರಿಚಯ ಮಾಡಿಕೊಟ್ಟು ಆ ಕವನ ಹುಟ್ಟಿದ ಸಂದರ್ಭವನ್ನು ಪ್ರಸ್ತಾವನೆಯಲ್ಲಿ ವಿವರಿಸಬೇಕಾಗುತ್ತದೆ ಹೀಗೆಯೇ ಐತಿಹಾಸಿಕ, ಪೌರಾಣಿಕ ಸಂಗತಿಗಳಿಗನುಸರಿಸಿ ಇರುವ ಕವಿತೆಗಳಿಗೂ ಪ್ರಸ್ತಾವನೆಯು ಆಯಾ ಸಂದರ್ಭ ಸೂಚನೆಯಿಂದ ಕೂಡಿದುದಾಗಿರುತ್ತದೆ ಇದೇ ಕಾಲಕ್ಕೆ ಕವಿತೆಯಲ್ಲಿ ಒರುವ ಕವಿ ಸಮಯ, ವಿಶಿಷ್ಟ ಕಲ್ಪನೆಗಳ ಸ್ಥೂಲ ವಿಚಾರಗಳನ್ನು ವಿದ್ಯಾರ್ಥಿಗಳಿಗೆ ತಿಳಿಸಬೇಕು ಅದರಿಂದ ಕವಿತೆಯ ಭಾವ ಗ್ರಹಣಕ್ಕೆ ಸಹಾಯವಾಗುವುದು

(೨) ಕೇಂದ್ರ ಪ್ರಶ್ನೆ - ಕವಿತಾ ಪಾಠದ ಉದ್ದೇಶವನ್ನು ಹೇಳಿದ ಕೂಡಲೆ ಆ ಕವಿತೆಯ ಮುಖ್ಯ ಭಾವದ ಕೇಂದ್ರವನ್ನು ಹೊರಗೆಡಹುವ ಒಂದೆರಡು ಪ್ರಶ್ನೆಗಳನ್ನು ವಿದ್ಯಾರ್ಥಿಗಳಿಗೆ ಕೊಡಬೇಕು

(೩) ಶಿಕ್ಷಕರ ಕಾವ್ಯ ಗಾಯನ - ' ಕಾವ್ಯಗಾಯನ ' ಎಂಬ ಪದವನ್ನು ಇಲ್ಲಿ ಬುದ್ಧಿಪೂರ್ವಕವಾಗಿ ನಾವು ಬಳಸುತ್ತ ಇದ್ದೇವೆ. ಯಾಕೆಂದರೆ ಗದ್ಯದಂತೆ ಯಾವಾಗಲೂ ಕವಿತೆಯನ್ನು ಓದಲಿಕ್ಕೆ ಹೋಗಬಾರದು ಧ್ವನಿಯು ಭಾವ ಸ್ಫುರಣಕ್ಕೆ ಸಾಧನವಾಗಿರುತ್ತದೆ ಹೀಗೆ ಅನ್ನಲಿಕ್ಕೆ ಕಾವ್ಯದ ಅಖಂಡತ್ವವೂ ಅವಶ್ಯಕವಾಗಿದೆ ಬಹಳ ದೊಡ್ಡ ಕವಿತೆ ಇದ್ದರೆ ಅನಿವಾರ್ಯ ಸಂದರ್ಭಗಳಲ್ಲಿ ತುಂಡು ತುಂಡಾಗಿ ಕವಿತೆಯನ್ನು ವಿಭಾಗಿಸಿಕೊಂಡು ಹೇಳಬಹುದು.

(೪) ವಿವೇಚನೆ - ಕವಿಯ ಮುಖ್ಯ ಭಾವವನ್ನು ಕೇಂದ್ರಪ್ರಶ್ನೆಗಳಿಗೆ ಉತ್ತರ ರೂಪದಿಂದ ಹೊರಡಿಸಬೇಕು ಆ ಮೇಲೆ ಆಭಾವವನ್ನು ಪೋಷಿಸಲಿಕ್ಕೆ ಕವಿಯು ಯೋಜಿಸಿಕೊಂಡ ವಿವಿಧ ಕಲ್ಪನೆಗಳನ್ನು ವಿವರಿಸ

ಬೇಕು ಹೀಗೆ ಸಾಮಾನ್ಯಸ್ವರೂಪದ ವಿವೇಚನೆಯಿಂದ ಸೂಕ್ಷ್ಮ ಭಾವದ ಪದರುಗಳತ್ತ ಮಕ್ಕಳನ್ನು ಕರೆದುಕೊಂಡು ಹೋಗಬೇಕು ಕವಿಯ ಸಂಕೇತ, ಭಾಷೆಯ ಸೂಚನೆ, ಅಲಂಕಾರ ಇತ್ಯಾದಿಗಳ ವಿವರವೂ ಬರುತ್ತ ಹೋಗಿ ಕವನದ ಪೂರ್ಣ ಕಲ್ಪನೆಯು ವಿದ್ಯಾರ್ಥಿಗಳಿಗೆ ಆಗುವಂತೆ ವಿವೇಚನೆಯು ಇರಬೇಕು ಮಕ್ಕಳಿಗೆ ಬೇಸರವಾಗುವಂತೆ ಪ್ರೌಢ ವ್ಯಾಖ್ಯಾನವನ್ನು ಕೊಡುತ್ತ ಶಿಕ್ಷಕರು ನಿಲ್ಲಕೂಡದು.

(೫) ಸಾಮೂಹಿಕ ಕಾವ್ಯಗಾಯನ – ಶಿಕ್ಷಕರು ಇನ್ನೊಮ್ಮೆ ಕವನವನ್ನು ಅಂದು ತೋರಿಸಬೇಕು ಈಗ ಕವಿತೆಯ ಭಾವವು ಸ್ಪಷ್ಟ ಮಕ್ಕಳಲ್ಲಿ ಮೂಡಿ ನಿಲ್ಲುವುದು ಸಾಮೂಹಿಕವಾಗಿ ವಿದ್ಯಾರ್ಥಿಗಳಿಂದಲೂ ಕವಿತೆ ಅನ್ನಿಸಬೇಕು.

(೬) ಪುನರವಲೋಕನ – ಕವನದ ಭಾವದ ಎಳೆಗಳನ್ನು ಒಂದೊಂದಾಗಿ ಮಕ್ಕಳಿಂದ ಹೊರಡಿಸಿಕೊಳ್ಳಬೇಕು ಒಟ್ಟು ಭಾವವನ್ನು ಒಬ್ಬ ವಿದ್ಯಾರ್ಥಿಯ ಕಡೆಯಿಂದ ಸಂಕಲಿಸ ಹಚ್ಚುವುದು ಅಂಥದೇ ಇನ್ನೊಂದು ಕವನದೊಡನೆ ತುಲನೆ ಮಾಡಿಸಬಹುದು ಪರ್ಯಾಯತರ ಕವಿತೆ ಇದ್ದರೆ ಕವನಕ್ಕೆ ಹೆಸರನ್ನು ಸೂಚಿಸ ಹಚ್ಚುವುದು ಕವಿತೆಯಲ್ಲಿಯ ಭಾವ ದೊಡನೆ ಮಕ್ಕಳು ಸಮರಸವಾಗಿ ಹೋಗುವಂತೆ ಮಾಡುವುದು.

(೭) ಗೃಹಪಾಠ – ಕವನವನ್ನು ಮನೆಯಲ್ಲಿ ಪಾಠಮಾಡಿ ತರಲಿಕ್ಕೆ ಹೇಳುವುದು. ಇಲ್ಲವೆ ಸರಳಾನುವಾದ ಬರೆದು ತರಲಿಕ್ಕೆ ಹೇಳುವುದು

## ಮಾಧ್ಯಮಿಕ ಶಾಲೆಯ ಮೇಲಿನ ವರ್ಗಗಳಲ್ಲಿ

ಈ ತರಗತಿಗಳಲ್ಲಿಯ ವಿದ್ಯಾರ್ಥಿಗಳಿಗೆ ಕವನವೆಂಬುದು ಕೇವಲ ತಿಳಿದು ಕೊಳ್ಳುವ ವಿಷಯವಲ್ಲ, ಆನ ಭವಿಸುವ ಸಂಗತಿಯೆಂಬ ಕಲ್ಪನೆಯು ಆಗ ಲಿಕ್ಕೆ ಬೇಕು ಆದರಿಂದ ಅವರು ಕವಿತೆಯನ್ನು ವರ್ಗದಲ್ಲಿ ಕಲಿತು ಬಿಡು ವಂತಿಲ್ಲ ಕಲ್ಲುಸಕ್ಕರೆಯ ಹರಳನ್ನು ಬಾಯಿಯಲ್ಲಿ ಹಿಡಿದು, ಅದರ ಸವಿ ಯನ್ನು ಸವಿಯುವಂತೆ ಈ ಪ್ರೌಢ ವಿದ್ಯಾರ್ಥಿಗಳು ಶಿಕ್ಷಕರ ಸಹಾಯದಿಂದ ಶಾಲೆಯಲ್ಲಿ ತಿಳಿದುಕೊಂಡ ಕವನವನ್ನು ಆಗಾಗ ಅಂದುಕೊಂಡು, ಆದರ

ಭಾವವನ್ನು ಅನುಭವಿಸುವಂತಾಗಬೇಕು ಹೀಗೆ ಆಗಲಿಕ್ಕೆ ಈ ವರ್ಗ ಗಳಲ್ಲಿಯ ಕವಿತಾ ಶಿಕ್ಷಣವು ಕವಿಯ ಮಾರ್ಗವನ್ನು ಅನುಸರಿಸಿ ಸಾಗಲಿಕ್ಕೆ ಬೇಕು ಅದಕ್ಕಾಗಿ ಇಲ್ಲಿ ಯಾವ ತಿಂಗಳಲ್ಲಿ, ಯಾವ ದಿವಸ, ಯಾವ ಹೊತ್ತಿಗೆ ಎಂಥ ಕವಿತೆ, ಕಲಿಸಲಿಕ್ಕೆ ಆರಿಸಬೇಕೆಂಬುದನ್ನು ಶಿಕ್ಷಕರು ವಿಚಾರಿಸ ಬೇಕಾಗುವುದು ಕೇವಲ ಶಾಲೆಯ ವೇಳಾಪತ್ರಿಕೆಗೆ ಒಳಪಟ್ಟು ಈ ಶಿಕ್ಷಣ ಸಾಗಿದರೆ ನಡೆಯದು. ಈ ಕೆಲವು ಮಾತುಗಳನ್ನು ಲಕ್ಷದಲ್ಲಿಟ್ಟು ಮಾಧ್ಯಮಿಕ ಶಾಲೆಯ ಮೇಲಿನ ವರ್ಗಗಳಲ್ಲಿಯ ಕವಿತಾ ಶಿಕ್ಷಣದ ರೂಪರೇಷೆಯನ್ನು ಇಲ್ಲಿ ಕೊಡಲಿಕ್ಕೆ ಯತ್ನಿಸೋಣ.

(೧) ಪ್ರಸ್ತಾವನೆ – ಕವನದ ಭಾವವನ್ನು ಅನುಭವಿಸಲಿಕ್ಕೆ ತಕ್ಕ ವಾತಾವರಣ ನಿರ್ಮಾಣ ಮಾಡುವಂಥ ಯಾವುದೇ ಸಂಗತಿಯನ್ನು ಪ್ರಸ್ತಾವನೆಯಲ್ಲಿ ಸೇರಿಸಬಹುದು ಕವಿ ಜೀವನ, ಕಾವ್ಯವಸ್ತು, ಕವನ ಸಂದರ್ಭ ಗಳಿಗೆ ಸಂಬಂಧಿಸಿದ್ದು ಇರುವುದು ಉಚಿತವಾಗಿದೆ

(೨) ಕಾವ್ಯ ಗಾಯನ – ಶಿಕ್ಷಕರು ಒಂದೆರಡು ಸಲ ಚೆನ್ನಾಗಿ ಕವನವನ್ನು ಅನ್ನಬೇಕು ಆಗ ಕವಿಯಲ್ಲಿ ಕವನ ಮಾಡಿದಾಗ ಹುಟ್ಟಿದ ಭಾವವು ಈಗ ಶಿಕ್ಷಕರಲ್ಲಿ ಪ್ರತಿಫಲಿಸಬೇಕು ಅಷ್ಟು ಉತ್ಕಟವಲ್ಲದಿದ್ದರೂ ಕವಿಯ ಭಾವಸಮಾಧಿಯ ಸಮೀಪಕ್ಕಾದರೂ ಶಿಕ್ಷಕರು ಮುಟ್ಟಬೇಕು

(೩) ವಿವೇಚನೆ – ಕವಿಯ ಭಾವದ ಪೂರ್ಣ ಪರಿಚಯವನ್ನು, ಅದು ಶಬ್ದಗಳಲ್ಲಿ, ಸಮುಚಿತ ಶೈಲಿಯಲ್ಲಿ, ರೂಪುಗೊಂಡ ಕ್ರಮವನ್ನು ವಿದ್ಯಾರ್ಥಿಗಳು ಅರಿತುಕೊಳ್ಳುವಂತೆ ಶಿಕ್ಷಕರು ಮಾರ್ಗದರ್ಶನ ಮಾಡುವುದು. ವಿದ್ಯಾರ್ಥಿಗಳ ಶಕ್ತಿಯು ಸಾಲದ ಸಂದರ್ಭದಲ್ಲಿ ಸಹಾಯ ನೀಡುವುದು ಮುಖ್ಯವಾಗಿ ವಿದ್ಯಾರ್ಥಿಗಳೇ ಮುನ್ನಡೆಯಬೇಕು ಶಿಕ್ಷಕರು ಅವರ ಹಿಂದೆ ಹಿಂದೆ ಸಾಗುವ ರೀತಿಯಲ್ಲಿ ಇರಬೇಕು, ತಾನೇ ಮುಂದಾಗ ಬಾರದು. ಹೀಗೆ ಕವಿತೆಯ ಸ್ವಾರಸ್ಯ ಕಂಡು ಹಿಡಿದು, ಅಲ್ಹಾದಪಡುವಾಗ ಶಬ್ದದ ಉತ್ಪತ್ತಿ, ಅಲಂಕಾರದ ವಿವರ, ಸಮಾಸ, ಸಂಧಿಗಳ ವಿವರಣೆಯ ಗೊಡವೆಗೆ ಹೋಗಬಾರದು ಅವುಗಳನ್ನು ಹಿಂದಿನಿಂದ ನೋಡಬಹುದು. ಆದರೆ ಪದಗಳ ನಾದಮಾಧುರ್ಯ, ಅದರಿಂದಾಗುವ ಭಾವ ಪುಷ್ಟಿಗಳ ಕಡೆಗೆ ಅವಶ್ಯವಾಗಿ ವಿದ್ಯಾರ್ಥಿಗಳ ಮನಸ್ಸನ್ನು ಸೆಳೆಯಬೇಕು.

ಕವಿಯ ಮುಖ್ಯ ಭಾವ ಯಾವುದು, ಅದನ್ನು ಸ್ಪಷ್ಟಗೊಳಿಸಲಿಕ್ಕೆ ಅವನು ಕಟ್ಟಿದ ಕಲ್ಪನೆ, ಉಪಯೋಗಿಸಿದ ಚೌಕಟ್ಟು, ಭಾವದ ಉತ್ಕಟತೆಯ ಕಡೆಗೆ ಸಾಗಿದ ಮೆಟ್ಟಿಲುಗಳನ್ನೆಲ್ಲ ಗುರುತಿಸಲು ವಿದ್ಯಾರ್ಥಿಗಳು ಸಮರ್ಥರಾಗುವುದು ಅದಕ್ಕಾಗಿ ತಿರುತಿರುಗಿ ಅವಶ್ಯವಾದ ಸಾಲುಗಳನ್ನು ವರ್ಗದಲ್ಲಿ ವಿದ್ಯಾರ್ಥಿಗಳೂ ಶಿಕ್ಷಕರೂ ಅನ್ನುತ್ತ ಹೋಗಬೇಕು ಒಟ್ಟಿಗೆ ವಿದ್ಯಾರ್ಥಿಗಳ ಅನುಭವವು ಜಾಗೃತಗೊಳ್ಳಬೇಕು ಕವಿಯ ಭಾವದೊಡನೆ ತಾದಾತ್ಮ್ಯ ಹೊಂದಬೇಕು. ಅಂದರೆ ಕವಿತಾ ಶಿಕ್ಷಣವು ಸಾರ್ಥಕವಾಗುವುದು

(೪) ಉಪಸಂಹಾರ – ವಿದ್ಯಾರ್ಥಿಗಳ ಅನುಭವ ಜಾಗೃತಿಯ ಶಿಖರಕ್ಕೆ ಮುಟ್ಟುವಂತೆ ಕಾವ್ಯ ಗಾಯನದಿಂದಲೇ ಕವಿತಾ ಪಾಠವು ಮುಗಿಯಬೇಕು ಸ್ಫೂರ್ತಿಯಿಂದ ಹಾಡಲು ಸಿದ್ಧರಾದ ವಿದ್ಯಾರ್ಥಿಗಳಿಗೆ ಇಲ್ಲಿ ಅವಕಾಶ ಕಲ್ಪಿಸಿಕೊಡಬೇಕು

ಹೀಗೆ ಕವನದ ಒಟ್ಟು ಅಭ್ಯಾಸ ಸಾಗಿದರೂ ಕವಿಯ ಭಾಷೆ, ಅದರಲ್ಲಿಯ ಕಠಿಣ ಪದಗಳ ಅರ್ಥ, ಪದಸಿದ್ಧಿ, ಅಲಂಕಾರ, ವ್ಯಾಕರಣದ ವಿವಿಧ ವಿಷಯಗಳ ಅಭ್ಯಾಸವೂ ಈ ತರಗತಿಗಳಲ್ಲಿ ಆಗಲೇ ಬೇಕಾಗುತ್ತದೆ. ಅದನ್ನು ಶಿಕ್ಷಕರು ಇನ್ನೊಂದು ದಿನ ಹೇಳಿ ಕೊಡಬಹುದು ಒಂದೇ ಗಂಟೆಯಲ್ಲಿ ಎಲ್ಲವನ್ನೂ ಹೇಳಿ, ಮುಗಿಸಲಿಕ್ಕೆ ಹೋಗಬಾರದು. ಬುದ್ಧಿಪೂರ್ವಕವಾಗಿ ಕಲಿಯಬೇಕಾದುದನ್ನು ಬುದ್ಧಿಪೂರ್ವಕ ಶಿಕ್ಷಕರು ಕಲಿಸಬೇಕು. ಇದಕ್ಕಾಗಿ ವಿದ್ಯಾರ್ಥಿಗಳ ಮೇಲೆ ಒತ್ತಾಯ ಮಾಡಬಹುದು ಭಾವಪೂರ್ವಕವಾಗಿ ಕಲಿಸುವದನ್ನು ಹೃತ್ಪೂರ್ವಕವಾಗಿ ಕಲಿಸಬೇಕು. ಮಕ್ಕಳು ಮನಃಪೂರ್ವಕವಾಗಿ ಕವನವನ್ನು ಅನುಭವಿಸುವಂಥ ರೀತಿಯಲ್ಲಿ ಕವಿತಾ ಶಿಕ್ಷಣ ಸಾಗಬೇಕು

ಇನ್ನು ಕವಿತೆಯನ್ನು ಎಲ್ಲ ಶಿಕ್ಷಕರೂ ಚೆನ್ನಾಗಿ ಅನ್ನುವಂಥವರೇ ಇರುವುದು ಸಾಧ್ಯವಿಲ್ಲ. ಆಗ ಒಳ್ಳೆಯ ವಿದ್ಯಾರ್ಥಿಗಳಿಂದ ಕವಿತೆಯನ್ನು ಅನ್ನಿಸಬಹುದು.

## ೮. ವ್ಯಾಕರಣ ಕಲಿಸುವ ಕ್ರಮ

### (೧)

ಭಾಷಾ ಶಿಕ್ಷಣದಲ್ಲಿ ಮುಖ್ಯವಾಗಿ ಮೂರು ವಿಭಾಗಗಳು ಅವುಗಳನ್ನು ಗದ್ಯ, ಪದ್ಯ, ವ್ಯಾಕರಣವೆಂದು ಇಲ್ಲಿ ಸೂಚಿಸಬಹುದು ಇವುಗಳಲ್ಲಿ ವ್ಯಾಕರಣವು ಭಾಷೆಯ ಶಾಸ್ತ್ರವಾಗಿದೆ ಈ ಶಾಸ್ತ್ರವು ಗದ್ಯ, ಪದ್ಯಗಳಲ್ಲಿ ಒಡಮೂಡಿರುತ್ತದೆ ಅಂದರೆ ವ್ಯಾಕರಣ ನಿಯಮಗಳಿಗೆ ಅನುಸರಿಸಿಯೇ ವಾಕ್ಯರಚನೆ, ಪದಪ್ರಯೋಗ, ಶಬ್ದ ಶಬ್ದಗಳಲ್ಲಿಯ ಸಂಬಂಧಗಳೆಲ್ಲ ಗದ್ಯಪದ್ಯಗಳಲ್ಲಿ ರೂಪುಗೊಂಡಿರುತ್ತವೆ. ಆದರಿಂದ ಈ ಶಾಸ್ತ್ರದ ಅಭ್ಯಾಸವು, ವಿದ್ಯಾರ್ಥಿಗಳು ಗದ್ಯಪದಗಳನ್ನು ಚೆನ್ನಾಗಿ ತಿಳಿದುಕೊಳ್ಳುವಂತೆ ಆದ ಮೇಲೆ ಆರಂಭವಾಗುವದು ಯಾವಾಗಲೂ ಕಲೆಯನ್ನು ತಿಳಿದುಕೊಂಡ ಮೇಲೆ ಆ ಕಲೆಯ ಹಿಂದಿರುವ ಶಾಸ್ತ್ರವನ್ನು ಅಭ್ಯಸಿಸುವದಿರುತ್ತದೆ ಈ ತತ್ತ್ವಕ್ಕೆ ಅನುಸರಿಸಿಯೇ ಗದ್ಯ-ಪದ್ಯಗಳ ಶಿಕ್ಷಣ ವಿಚಾರಗಳ ತರುವಾಯ ವ್ಯಾಕರಣ ಕಲಿಸುವ ಕ್ರಮವನ್ನು ಈಗ ಅವಲೋಕಿಸುತ್ತಿದ್ದೇವೆ

ಮುಖ್ಯ ವಿಷಯಕ್ಕೆ ಸಾಗುವ ಪೂರ್ವದಲ್ಲಿ, ಭಾಷಾ ಶಿಕ್ಷಣದಲ್ಲಿ ವ್ಯಾಕರಣಕ್ಕೆ ಇರುವ ಸ್ಥಾನವೇನು? — ಎಂಬ ಪ್ರಶ್ನೆಗೂ ಸ್ವಲ್ಪದರಲ್ಲಿ ಉತ್ತರಿಸಬೇಕು ಇತ್ತೀಚಿಗೆ ಪ್ರಾಥಮಿಕ ಹಾಗು ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಗಳಲೆಲ್ಲ ವ್ಯಾಕರಣ ವಿಷಯದ ಜ್ಞಾನದ ಕೊರತೆಯೂ ವ್ಯಾಕರಣ ಶಿಕ್ಷಣದಲ್ಲಿ ಶಿಕ್ಷಕರ ಅಲಕ್ಷ್ಯವೂ ಕಂಡು ಬರುತ್ತದೆ ಅದಕ್ಕೆ ಕಾರಣ ಒಂದೇ ಪರೀಕ್ಷೆಗಳಲ್ಲಿ ವ್ಯಾಕರಣಕ್ಕೆ ವಿಶೇಷ ಸ್ಥಾನವಿಲ್ಲ ಕೇವಲ ಪರೀಕ್ಷೆಯ ದೃಷ್ಟಿಯಿಂದ ಅಭ್ಯಾಸಕ್ರಮ ಸಾಗಿದಾಗ ಇಂಥ ಶಾಸ್ತ್ರೀಯ ವಿಷಯಗಳತ್ತ ಲಕ್ಷ್ಯವನ್ನಾದರೂ ಯಾರು ಕೊಡುವರು? ವ್ಯಾವಹಾರಿಕ ಜಗತ್ತಿನಲ್ಲಿ ಅದಕ್ಕೆ ಬೆಲೆಯಾದರೂ ಏನಿದೆ? ಜ್ಞಾನಕ್ಕಾಗಿ ಜ್ಞಾನ ಎನ್ನುವವರು ಮಾತ್ರ ಈ ವ್ಯಾಕರಣದ ಅಭ್ಯಾಸಕ್ಕೆ ತೊಡಗವಲ್ಲರೇಕೆ? ಭಾಷೆಯನ್ನು ಅನುಕರಣದಿಂದ ಕಲಿಯಬಹುದು ವ್ಯಾಕರಣದ ಪರಿಭಾಷೆಯ ಜ್ಞಾನವಿಲ್ಲದೆ ದೊಡ್ಡ ದೊಡ್ಡ ಸಾಹಿತಿಗಳೂ ಕೂಡ ಆಗಬಹುದು ಅಂದ ಮೇಲೆ ವ್ಯಾಕರಣ ಶಿಕ್ಷಣದ ಅವಶ್ಯಕತೆ ಏನು? — ಇತ್ಯಾದಿ ವಿಚಾರಗಳು ವ್ಯಾಕರಣ ವಿಷಯದ ಅಭ್ಯಾಸಕ್ರಮವನ್ನೇ ಸಡಲಿಸಿಬಿಟ್ಟಿವೆ.

ಅಲ್ಲದೆ, ವ್ಯಾಕರಣವು ವಿದ್ಯಾರ್ಥಿಗಳ ಮನಸ್ಸಿನ ವಿಕಾಸಕ್ಕೆ ಸಹಾಯವಾಗದು. ಬುದ್ಧಿಯ ಬೆಳವಣಿಗೆಗೆ ಉಪಕಾರಕವೆನಿಸದು ಆ ವ್ಯಾಕರಣದ ಪಾರಿಭಾಷಿಕ ಪದಗಳೂ ತಾತ್ವಿಕ ವಿವರಗಳೂ ಕಠಿಣ ವ್ಯಾಖ್ಯೆಗಳೂ ಚಿಕ್ಕ ಮಕ್ಕಳ ಮನಸ್ಸಿನ ಮೇಲೆ ಭಾರವೆನಿಸುವವು ಒತ್ತಾಯದಿಂದ ಹೇರಿದಂತಾಗುವವು ಇವೇ ಮೊದಲಾದವುಗಳು ವ್ಯಾಕರಣ ವಿಷಯಕ್ಕೆ ಏಳುವ ಇನ್ನಿತರ ಪ್ರಶ್ನೆಗಳಾಗಿವೆ

ಇನ್ನು, ಭಾರತದಲ್ಲಿ ಬ್ರಿಟಿಷ ರಾಜ್ಯಸತ್ತೆಯಲ್ಲಿ ನಮ್ಮ ಹೊಸ ಶಿಕ್ಷಣವು ಆರಂಭವಾಯಿತು. ಆಗ ನಾವೆಲ್ಲ ಪರಕೀಯ ಭಾಷೆಯಾದ ಇಂಗ್ಲೀಷನ್ನು ಅನಿವಾರ್ಯವಾಗಿ ಕಲಿಯಲಿಕ್ಕೆ ಬೇಕಾಯಿತು ಮಾತೃಭಾಷೆಯಲ್ಲದ ಇನ್ನಾವ ಭಾಷೆಯನ್ನಾದರೂ ವಿದ್ಯಾರ್ಥಿಗಳು ಅಭ್ಯಸಿಸಬೇಕಾದರೆ ವ್ಯಾಕರಣವೇ ಮುಖ್ಯಾಧಾರವು ವ್ಯಾಕರಣದ ಮುಖಾಂತರವೇ ನಾವು ಪರಭಾಷೆಯನ್ನು ಕಲಿಯಲಿಕ್ಕ ಬೇಕು ಈ ತತ್ತ್ವಕ್ಕೆ ಅನುಸರಿಸಿ, ನಮ್ಮ ಅಭ್ಯಾಸಕ್ರಮದಲ್ಲಿ ವ್ಯಾಕರಣಕ್ಕೊಂದು ರೂಪು ಕೊಡಲಾಯಿತು ಇಂಗ್ಲೀಷ ಭಾಷೆಯನ್ನು ಕಲಿಯಲು ಬೇಕಾದ 'ಭಾಷಾಂತರ' ಪುಸ್ತಕಗಳ ಮಾದರಿಯಲ್ಲೇ ಸಂಸ್ಕೃತವನ್ನು ಅಭ್ಯಸಿಸಲಿಕ್ಕೂ ಕೂಡ—ವ್ಯಾಕರಣ ಶಾಸ್ತ್ರದ ತಳಹದಿಯ ಮೇಲೆ ರೂಪುಗೊಂಡ—ಸಂಸ್ಕೃತ ಮೊದಲನೆಯ, ಎರಡನೆಯ ಪುಸ್ತಕಗಳು ಸಿದ್ಧವಾದುವು. ಇವೆಲ್ಲ ಮಾಧ್ಯಮಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳು ಅಭ್ಯಾಸ ಮಾಡಬೇಕಾಗುತ್ತಿರುವುದರಿಂದ ಪ್ರಾಥಮಿಕ ಶಾಲೆಗಳಲ್ಲೂ ಮಾತೃಭಾಷೆಯೊಡನೆ ವ್ಯಾಕರಣ ಶಿಕ್ಷಣಕ್ಕೆ ಆರಂಭವಾಯಿತು ಅದಕ್ಕಾಗಿ ವ್ಯಾಕರಣದ ನಿಯಮಗಳನ್ನು ವಿವರಿಸುವ ಪಠ್ಯಪುಸ್ತಕಗಳು ರಚಿತವಾದುವು ಇವು ಹನ್ನೆರಡನೆಯ ಶತಮಾನದ ಕನ್ನಡ ವ್ಯಾಕರಣ ಗ್ರಂಥಗಳ ಸಂಗ್ರಹರೂಪದಲ್ಲಿ ವಿದ್ಯಾರ್ಥಿಗಳ ಕೈಸೇರಿದವು. ಹತ್ತು ವರ್ಷ ವಯಸ್ಸಿನ ಮಕ್ಕಳು 'ಶಬ್ದಮಣಿ ದರ್ಪಣ'ದ ಸಂಗ್ರಹವೆನಿಸುವ 'ಲಘುವ್ಯಾಕರಣ', 'ನುಡಿಗನ್ನಡಿ' 'ನುಡಿಗಟ್ಟು'ಗಳನ್ನು ಪಾಠ ಮಾಡುವುದು ಅದನ್ನು ಶಾಸ್ತ್ರವೆಂದು ಶಾಸ್ತ್ರೀಯ ರೀತಿಯಲ್ಲಿ 'ಶಬ್ದಮಣಿ ದರ್ಪಣ' ದ ಶ್ಲೋಕಗಳನ್ನು ಅಂದದು ತೋರಿಸಿ ಕಲಿಸುವ ಮೂರನೆಯ ವರ್ಷದ ಟ್ರೇಂಡ ಶಿಕ್ಷಕರು, ಇಂಥ ಎಲ್ಲ ಕಾರಣ

ಗಳಿಂದಾಗಿ ವ್ಯಾಕರಣವೊಂದು ಆಧುನಿಕ ಶಿಕ್ಷಣದಲ್ಲಿ ಸಮಸ್ಯೆಯ ವಿಷಯವಾಗಿ ಉಳಿತಿದೆ, ಉಳಿತಿತ್ತು.

ಹಾಗಾದರೆ ಪರಭಾಷೆಯ ಅಭ್ಯಾಸ ಆರಂಭವಾಗುವಾಗ ವಿದ್ಯಾರ್ಥಿಗಳಿಗೆ ಆವಶ್ಯವಿದ್ದ ವ್ಯಾಕರಣ ಕಲಿಸಬಹುದು. ಮಾತೃಭಾಷೆಯ ಅಭ್ಯಾಸಕ್ಕೆ ಅದರ ಅವಶ್ಯಕತೆ ಏನು ?–ಎಂದು ಕೇಳಿ, ಆ ವಿಷಯ ಕಲಿಸುವ ತೊಂದರೆಯಿಂದ ಪಾರಾಗಲಿಕ್ಕೆ ಹವಣಿಸುವ ಜನರೂ ದೊರೆಯಬಹುದಾಗಿದೆ. ವ್ಯಾಕರಣದಂಥ ತಾತ್ವಿಕ ವಿಷಯ, ಪೃಥಕ್ಕರಣ ಮಾಡುವುದು, ವರ್ಗೀಕರಣ ಮಾಡುವುದು, ಇವೆಲ್ಲ ತಿಳಿದುಕೊಳ್ಳಲಿಕ್ಕೆ ಬೇಕಾಗುವ ಬೌದ್ಧಿಕ ಶಕ್ತಿಯು ಮಕ್ಕಳಲ್ಲಿ ಬೆಳೆಯಲಿಕ್ಕೆ ಅವರಿಗೆ ಹದಿಮೂರು ಹದಿನಾಲ್ಕು ವರ್ಷಗಳಷ್ಟಾದರೂ ವಯಸ್ಸು ಆಗಲಿಕ್ಕೆ ಬೇಕು ಅಲ್ಲಿಯ ವರೆಗೆ ವ್ಯಾಕರಣವನ್ನು ಆರಂಭಿಸಕೂಡದು —ಎನ್ನುವ ಪಂಗಡವೂ ಒಂದಿದೆ.

ಇಂಥ ಎಲ್ಲ ಸಮಸ್ಯೆಗಳಿಗೆ ಸಂಗ್ರಹರೂಪವಾಗಿ ಇಲ್ಲಿ ಹೀಗೆ ಸಮಾಧಾನವನ್ನು ಹೇಳಬಹುದಾಗಿದೆ — ವ್ಯಾಕರಣವನ್ನು ಕಲಿಸುವ ಪದ್ಧತಿಯು ಒಂದೇ ಇಲ್ಲ. ವಿವಿಧ ಪದ್ಧತಿಗಳಿಂದ ಅದನ್ನು ಬೋಧಿಸಲಿಕ್ಕೆ ಸಾಧ್ಯವಿದೆ ಒಳ್ಳೆಯ ಶಿಕ್ಷಕನಿದ್ದರೆ ಮಕ್ಕಳಿಗೆ ಮನೋರಂಜನೆಯಾಗುವಂತೆಯೂ ವ್ಯಾಕರಣ ಪಾಠಗಳನ್ನು ಹೇಳಿಕೊಡಬಹುದು ಅದರಿಂದ ಪ್ರಾಥಮಿಕ ಶಾಲೆಗಳ ಮೂರನೆಯ ತರಗತಿಯಿಂದಲೇ ವ್ಯಾಕರಣ ವಿಷಯವನ್ನು ಕಲಿಸಲಿಕ್ಕೆ ಆರಂಭಿಸಲು ಅಡ್ಡಿಯಿಲ್ಲ ಮೊದ ಮೊದಲು ವ್ಯಾಕರಣದ ಶಾಸ್ತ್ರೀಯತೆಯನ್ನು ಒದಿಗಿಟ್ಟು, ಸಾಮಾನ್ಯವಾಗಿ ಅದರ ಕಾರ್ಯ ಸ್ವರೂಪವನ್ನೇ ವಿದ್ಯಾರ್ಥಿಗಳಿಗೆ ತೋರಿಸಿಕೊಡಲು ಯತ್ನಿಸಬೇಕು ಅಂದರೆ ಉದ್ಗಾಮಿ ಪದ್ಧತಿಯಿಂದ ವ್ಯಾಕರಣದ ಅಭ್ಯಾಸವು ಆರಂಭವಾಗಬೇಕು ಇದರಲ್ಲಿ ಅನೇಕ ಉದಾಹರಣಗಳನ್ನು ಮಕ್ಕಳ ಮುಂದೆ ಇಟ್ಟು, ಅವುಗಳಿಂದ ಒಂದು ನಿಯಮವನ್ನು ಕಂಡುಹಿಡಿಯಲಿಕ್ಕೆ ಹೇಳುವದು ಇರುತ್ತದೆ. ಇದನ್ನು ಮನೋರಂಜಕವಾಗಿಯೂ ಮಾಡುತ್ತ ಕಲಿಸಬಹುದು ಮಕ್ಕಳು ಮುಂದೆ ಐದು ಆರನೆಯ ತರಗತಿಗೆ ಹೋದ ತರುವಾಯ ಅವಗಾಮಿ ಪದ್ಧತಿಯನ್ನು ವ್ಯಾಕರಣ ಶಿಕ್ಷಣಕ್ಕೆ ಅನುಸರಿಸಬಹುದು. ಈಗ ವ್ಯಾಖ್ಯೆಯೊಂದನ್ನು ಹೇಳಿ ಅದಕ್ಕೆ ತಕ್ಕ ಉದಾಹರಣೆಗಳನ್ನು ವಿದ್ಯಾರ್ಥಿಗಳಿಗೆ ಶೋಧಿಸಹಚ್ಚುವುದು.

ಇದನ್ನು ಕೂಡ ಸ್ವಲ್ಪ ಪ್ರಯತ್ನವಟ್ಟರೆ ಶಿಕ್ಷಕರು ಬಹಳ ಮನೋಹರವಾಗಿ ಕಲಿಸಲು ಸಾಧ್ಯವಿದೆ ಮುಂದೆ ಮಾಧ್ಯಮಿಕ ಶಾಲೆಗಳ ಮೇಲಿನ ತರಗತಿಗಳಲ್ಲಿ ವ್ಯಾಕರಣ ವಿಷಯವನ್ನು ಒಂದು ಶಾಸ್ತ್ರವೆಂದೇ ಮಕ್ಕಳು ಕಲಿಯಲಿಕ್ಕೆ ಅಡ್ಡಿಯಿಲ್ಲ ಅವರಿಗೆ ತಾವೊಂದು ಬಾಷಾ ಶಾಸ್ತ್ರವನ್ನು ಅಭ್ಯಸಿಸುವೆವೆಂಬ ಅರಿವು ಇರಬೇಕು ಈ ಕ್ರಮದಿಂದ ವ್ಯಾಕರಣದ ಅಭ್ಯಾಸ ಸಾಗಿದರೆ ಸಮಸ್ಯೆಗಳು ಬಹುಮಟ್ಟಿಗೆ ಇಲ್ಲದಂತಾಗುವವು ವಿದ್ಯಾರ್ಥಿಗಳಿಗೂ ಭಾರ, ಬೇಸರವೆನಿಸದೆ ವಿಷಯವು ಸಾಗುವುದು

(೨)

ಇನ್ನು ವ್ಯಾಕರಣದ ಅಭ್ಯಾಸಪತ್ರಿಕೆಯ ಕಡೆಗೆ ಹೊರಳೋಣ ಯಾವಾಗಲೂ ಅಭ್ಯಾಸವತ್ರಿಕಗೂ ಮಕ್ಕಳ ವಯೋಮರ್ಯಾದೆಗೂ ಸಂಬಂಧವಿರಲಿಕ್ಕೆ ಬೇಕು ಅಂದರೆ ಮಕ್ಕಳ ಆಕಲನ ಶಕ್ತಿಯು ಹೆಚ್ಚುತ್ತ ಹೋದಂತೆ ಅಬ್ಯಾಸಕ್ರಮವು ವಿಕಾಸವಾಗುತ್ತ ಹೋಗಬೇಕು ಅಂದರೆ ಗದ್ಯ, ಪದ್ಯಗಳ ಅಭ್ಯಾಸ ಪತ್ರಿಕೆಯಂತೆ ವ್ಯಾಕರಣದ ಅಭ್ಯಾಸ ಕ್ರಮದ ಬೆಳವಣಿಗೆಯಾದರೆ ಯೋಗ್ಯವೆನಿಸಗು ಇದಕ್ಕೊಂದು ವಿಶಿಷ್ಟ ಕ್ರಮವನ್ನೇ ಅನುಸರಿಸುವುದು ಸಯುಕ್ತಿಕವೆನಿಸುವುದು ವ್ಯಾಕರಣದ ಅಭ್ಯಾಸ ಪತ್ರಿಕೆಯ ವಿಕಾಸವನ್ನು, ಕೆರೆಯಲ್ಲಿ ಒಂದು ಕಲ್ಲು ಒಗೆಯಲು ಏಳುವ ವರ್ತುಲಾಕಾರದ ತೆರೆಗಳಿಗೆ ಹೋಲಿಸಬಹುದು. ಅಂದರೆ ಒಂದೇ ಮಧ್ಯ ಬಿಂದುವಿನ ಸುತ್ತಲೂ ಒಂದರ ಹಿಂದೊಂದು ಅನೇಕ ವರ್ತುಲಗಳು, ಹುಟ್ಟುವಾಗ ಚಿಕ್ಕವಾಗಿ ಹುಟ್ಟಿ, ಮುಂದೆ ವಿಸ್ತಾರವಾಗುತ್ತ ಹೋಗುವವು. ಅದರಂತೆ ವ್ಯಾಕರಣದ ಅಭ್ಯಾಸಕ್ರಮದ ಬೆಳವಣಿಗೆ ಇರಬೇಕು. ಇದಕ್ಕೊಂದು ಉದಾಹರಣೆಯನ್ನು ಕೊಟ್ಟು, ಸ್ಪಷ್ಟಪಡಿಸಬೇಕಾದರೆ ಹೀಗೆ ಹೇಳಬಹುದು – ಮೂರನೆಯ ಇಯತ್ತೆಯಲ್ಲಿ ವಾಕ್ಯಗಳ ಸಾಮಾನ್ಯ ಕಲ್ಪನೆಯನ್ನು ಮಾಡಿಕೊಡಬಹುದು ಅಂದರೆ ವಾಕ್ಯದ ಸ್ವರೂಪ, ಅದರಲ್ಲಿ, ಯಾವುದರ ವಿಷಯಕ್ಕೆ ಹೇಳಿದೆ, ಏನು ಹೇಳಿದೆ — ಇವುಗಳನ್ನು ವಿಂಗಡಿಸಲಿಕ್ಕೆ ಬರಬೇಕು. ಮುಂದೆ ನಾಲ್ಕನೆಯ ತರಗತಿಯಲ್ಲಿ ವಾಕ್ಯದೊಳಗಿನ ಕರ್ತೃ, ಕರ್ಮಗಳ ವಿಚಾರ, ಅವುಗಳಿಗೆ ಸಂಬಂಧಿಸಿದ

ಪದಗಳನ್ನು ಗುರುತಿಸಲು ಕಲಿಸಬಹುದು ಮುಂದಿನ ಐದನೆಯ ವರ್ಗದಲ್ಲಿ ಕರ್ತೃಪದಕ್ಕೆ ಸಂಬಂಧಿಸಿದ ಪದಗಳು ಯಾವ ರೀತಿಯಿಂದ ಸಂಬಂಧಿಸಿವೆ, ಅದರಂತೆ ಕರ್ಮ, ಕ್ರಿಯಾಪದಗಳೊಡನೆ ಇರುವ ಪದಗಳ ಸಂಬಂಧ ಎಂಥದು — ಇವೇ ಮೊದಲಾದವುಗಳನ್ನು ಕಲಿಸಬಹುದು. ಇದನ್ನೇ ಅನುಕ್ರಮವಾಗಿ ತರಗತಿಗಳಿಗೆ ಅನುಸರಿಸಿ, ವ್ಯಾಕರಣದ ಪರಿಭಾಷೆಯಲ್ಲಿ ಸೂಚಿಸಲಿಕ್ಕೂ ಬರುವುದು ಆಗ ಮೂರನೆಯ ತರಗತಿಯಲ್ಲಿ ವಾಕ್ಯವೆಂದ ರೇನು ? ಆಖ್ಯಾತ ಆಖ್ಯೇಯ ವಿಭಾಗಗಳ ಕಲ್ಪನೆ ನಾಲ್ಕನೆಯ ,ತರಗತಿ ಯಲ್ಲಿ ಕರ್ತೃ, ಕರ್ಮ, ಕ್ರಿಯಾಪದಗಳನ್ನು ಗುರುತಿಸಿ, ಅವುಗಳಿಗೆ ಸಂಬಂಧಿಸಿದ ಪದಗಳನ್ನು ವಿಂಗಡಿಸುವುದು ಸಾಮಾನ್ಯ ವಾಕ್ಯ ವಿಭಜನೆಯ ಕಲ್ಪನೆಯನ್ನು ಸ್ಥೂಲವಾಗಿ ಕೊಡಬಹುದು. ಐದನಯ ತರ ಗತಿಯಲ್ಲಿ ಕಾರಕಗಳ ವಿಚಾರ, ವಿಭಕ್ತಿ ಪ್ರತ್ಯಯಗಳ ವಿಚಾರಗಳನ್ನು ಕಲಿಸಲು ಇಟ್ಟುಕೊಳ್ಳಬಹುದು ಆದರೆ ಈ ವಿಷಯಗಳ ಶಿಕ್ಷಣವೆಲ್ಲ ವ್ಯಾಕರಣ ಶಾಸ್ತ್ರವನ್ನು ಕಲಿಸುತ್ತಲಿದ್ದೇವೆ — ಎಂಬ ಕಲ್ಪನೆಯಿಂದ ಸಾಗದೆ ಉದ್ಗಾಮಿ ಪದ್ಧತಿಯಿಂದ ಮನೋರಂಜಕವಾಗಿ ಸಾಗಬೇಕು ವ್ಯಾಕರಣದ ಇಂಥ ವಿಕಾಸಕ್ರಮವುಳ್ಳ ಅಭ್ಯಾಸ ಪದ್ಧತಿಗೆ ಶಿಕ್ಷಣ ತಜ್ಞರು ಸಮಕೇಂದ್ರಪದ್ಧತಿ ಎಂದು ಹೇಳುವರು. ಇದರಲ್ಲಿ ಹೊಂದಿಕೆ ಯಾಗುವಂಥ ವ್ಯಾಕರಣದ ವಿವಿಧ ವಿಷಯಗಳನ್ನು ಹೊಂದಿಸಿಯೂ ಕಲಿಸ ಬಹುದು ಮಾದರಿಗಾಗಿ ಹೇಳುವದಾದರೆ ಸಂಧಿ – ಸಮಾಸಗಳನ್ನು ಹೊಂದಿಸಿಕೊಂಡು ಅಭ್ಯಾಸ ಸಾಗಿಸಲಿಕ್ಕೆ ಬರುವುದು

ಮಾತೃಭಾಷೆಯ ವ್ಯಾಕರಣದ ಈ ಅಭ್ಯಾಸಪತ್ರಿಕೆಯನ್ನು ರೂಪಿಸಿ ಕೊಳ್ಳುವಾಗ, ಪ್ರಾಥಮಿಕ ಶಾಲೆಯ ಮೇಲಿನ ತರಗತಿಗಳಲ್ಲಿ ಆರಂಭ ವಾಗುವ ರಾಷ್ಟ್ರಭಾಷಗೂ ಮುಂದೆ ಮಾಧ್ಯಮಿಕ ಶಾಲೆಗಳಲ್ಲಿ ವಿದ್ಯಾರ್ಥಿ ಗಳು ಕಲಿಯಬೇಕಾಗಿರುವ ಇಂಗ್ಲೀಷ, ಸಂಸ್ಕೃತ ಭಾಷೆಗಳಿಗೂ ಉಪ ಯುಕ್ತವೆನಿಸುವಂತೆ ನಾವು ನೋಡಿಕೊಳ್ಳಬೇಕಾಗುವುದು. ಇವೆಲ್ಲ ಮಾತುಗಳನ್ನು ಗಮನಿಸಿ, ವ್ಯಾಕರಣದ ಸ್ಥೂಲವಾದ ಅಭ್ಯಾಸಪತ್ರಿಕೆಯ ರೂಪರೇಷೆಯೊಂದನ್ನು ಇಲ್ಲಿ ಕೊಡಲಿಕ್ಕೆ ಯತ್ನಿಸಿದ್ದೇವೆ. ಇದನ್ನು ತರಗತಿ ಗಳಿಗೆ ತಕ್ಕಂತೆ ವಿಭಾಗಿಸಿ ಕೊಡಲಾಗಿದೆ.

೩ ನೆಯ ತರಗತಿಯಲ್ಲಿ — ೧) ವಾಕ್ಯದ ಕಲ್ಪನೆ ೨) ಆಖ್ಯೇಯ ಆಖ್ಯಾತ ವಿಭಾಗಗಳ ಕಲ್ಪನೆ ೩) ನಾಮಪದ ಹಾಗು ಕ್ರಿಯಾಪದಗಳ ಸಾಮಾನ್ಯ ಕಲ್ಪನೆ

೪ ನೆಯ ತರಗತಿಯಲ್ಲಿ — ೧) ವಾಕ್ಯದೊಳಗಿನ ಕರ್ತೃ, ಕರ್ಮ ಗುರುತಿಸುವುದು ೨) ನಾಮಪದದ ಲಿಂಗ, ವಚನ ೩) ಕ್ರಿಯಾಪದಗಳ ಕಾಲ ೪) ಸರ್ವನಾಮಗಳ ಕಲ್ಪನೆ ೫) ವಿಶೇಷಣದ ಸಾಮಾನ್ಯ ಉಪಯೋಗ

೫ ನೆಯ ತರಗತಿಯಲ್ಲಿ – ೧) ಸ್ಥೂಲವಾಗಿ ವಾಕ್ಯದ ಪ್ರಕಾರಗಳು ೨) ವಾಕ್ಯದಲ್ಲಿ ಕರ್ತೃ ಕರ್ಮಗಳಿಗೆ ಸಂಬಂಧಿಸಿದ ಪದಗಳನ್ನು ಗುರುತಿಸುವುದು ೩) ನಾಮ, ಸರ್ವನಾಮ, ವಿಶೇಷಣ, ಕ್ರಿಯಾಪದ, ಅವ್ಯಯಗಳನ್ನು ಗುರುತಿಸುವುದು ಅವುಗಳ ಕಾರ್ಯ ೩) ಕ್ರಿಯಾಪದಗಳ ಮೂರು ಮುಖ್ಯ ಕಾಲಗಳು ೪) ಪ್ರಯೋಗಗಳ ಕಲ್ಪನೆ ೫) ಸರ್ವನಾಮಗಳ ಪುರುಷ, ಲಿಂಗ, ವಚನಗಳ ವಿಚಾರ ೬) ವಿಭಕ್ತಿಗಳು

೬ನೆಯ ತರಗತಿಯಲ್ಲಿ —(೧) ವಾಕ್ಯಗಳ ಪ್ರಕಾರಗಳ ವಿವರ ಅಭ್ಯಾಸ, ಸಾದಾ, ಪ್ರಶ್ನಾರ್ಥಕ, ಉದ್ಗಾರವಾಚಕ, ವಿಧೇಯಕ ಮತ್ತು ನಿಷೇಧಾತ್ಮಕ. (೨) ನಾಮ ಸರ್ವನಾಮಗಳ ಪ್ರಕಾರಗಳು (೩) ಕ್ರಿಯಾಪದಗಳ ಪ್ರಕಾರಗಳು. (೪) ಲಿಂಗ, ವಚನ, ಪುರುಷಗಳ ಅಭ್ಯಾಸ ಮುಂದರಿಸುವುದು (೫) ವಿಭಕ್ತಿ ಪ್ರತ್ಯಯ ಅವುಗಳ ಕಾರಕಗಳು (೬) ಸಂಧಿ–ಸಮಾಸಗಳ ಸಾಮಾನ್ಯ ವಿಚಾರ

೭ನೆಯ ತರಗತಿಯಲ್ಲಿ — (೧) ಪ್ರಧಾನವಾಕ್ಯ ಅಂಗವಾಕ್ಯಗಳು (೨) ಕರ್ತೃ, ಕರ್ಮಣಿ, ಭಾವೇ ಪ್ರಯೋಗಗಳು (೩) ವಿಶೇಷಣ, ಅವ್ಯಯಗಳ ಪ್ರಕಾರಗಳು (೪) ಕ್ರಿಯಾಪದದ ಅರ್ಥಗಳು ಕಾಲಾರ್ಥ ಸಂಭಾವನಾರ್ಥ, ವಿಧ್ಯರ್ಥ, ನಿಷೇದಾರ್ಥ. (೫) ವಿಭಕ್ತಿಗಳ ಕಾರಕಗಳ ಅಭ್ಯಾಸ ಮುಂದರಿಸುವುದು (೬) ಕ್ರಿಯಾ ವಿಶೇಷಣಗಳು (೭)ವ್ಯಂಜನ ಸಂಧಿ, ಸ್ವರಸಂಧಿಗಳ ಅಭ್ಯಾಸ. (೭) ತತ್ಪುರುಷ, ಕರ್ಮಧಾರಯ, ಬಹು

ವ್ರೀಹಿ ಮೊದಲಾದ ಸಮಾಸಗಳು (೮) ವರ್ಣಮಾಲೆಯ ಪರಿಚಯ · ಸ್ವರ, ವ್ಯಂಜನ, ಅರ್ಧಸ್ವರ. (೯) ಶಬ್ದಗಳ ಉತ್ಪತ್ತಿ (೧೦) ಛಂದಸ್ಸು.

೮ನೆಯ ತರಗತಿಯಲ್ಲಿ — (೧) ಮಿಶ್ರವಾಕ್ಯ, ವಾಕ್ಯಗಳ ವಿಶೇಷ ಅಭ್ಯಾಸ. (೨) ಸಾದಾ ವಾಕ್ಯಗಳಿಂದ ಮಿಶ್ರ ವಾಕ್ಯ ರಚಿಸುವುದು (೩) ಪ್ರಯೋಗ ಬದಲಿಸುವುದು. (೪) ಕ್ರಿಯಾಪದದೊಡನೆ ವಾಕ್ಯದೊಳಗಿನ ವಿವಿಧ ಪದಗಳ ಸಂಬಂಧ. (೫) ಕಾರಕಗಳಿಂದ ವಾಕ್ಯಗಳಲ್ಲಿಯ ಪದಗಳ ಅನ್ಯೋನ್ಯತೆ (೬) ಸಮಾಸಗಳ ಅಭ್ಯಾಸ ಮುಂದರಿಸುವುದು. (೭) ಕ್ರಿಯಾವಿಶೇಷಣ, ವಿಶೇಷಣಗಳನ್ನು ನಾಮಗಳಂತೆ ಉಪಯೋಗಿಸುವುದು (೮) ಗ್ರಂಥದ ಮೇಲಿನ ವ್ಯಾಕರಣ (೯) ಶಬ್ದೋತ್ಪತ್ತಿಯ ವಿಚಾರ ಮುಂದೆ ನಾಗಿಸುವುದು (೧೦) ಅಕ್ಷರಗಳ ಗುರು, ಲಘುತ್ವ ಗಳನ್ನು ಗುರುತಿಸುವುದು.

೯ನೆಯ ತರಗತಿಯಲ್ಲಿ — (೧) ವಾಕ್ಯ ವಿಭಜನೆ (೨) ಪ್ರಯೋಗಗಳ ವಿವರ ಅಭ್ಯಾಸ (೩) ಸಂಧಿ ಸಮಾಸಗಳ ಅಭ್ಯಾಸ ಮುಂದುವರಿಸುವುದು (೪) ವರ್ಣಮಾಲೆಯಲ್ಲಿ ಅಲ್ಪಪ್ರಾಣ, ಮಹಾಪ್ರಾಣ, ಮೃದು ವರ್ಣ, ಕರ್ಕಶವರ್ಣ ಅನುನಾಸಿಕ ಇತ್ಯಾದಿಗಳ ಅಬ್ಯಾಸ, ಅವುಗಳನ್ನು ಶಾಸ್ತ್ರೀಯ ಪದ್ಧತಿಯಿಂದ ಉಚ್ಚರಿಸುವುದು (೫) ವಿಭಕ್ತಿ ಪಲ್ಲಟ. (೬) ಶಬ್ದಗಳ ಉತ್ಪತ್ತಿಯ ಅಭ್ಯಾಸ (೭) ಮಾತೃಭಾಷೆಯಲ್ಲಿ ಪ್ರಚಾರದಲ್ಲಿರುವ ಸಂಸ್ಕೃತ ವೃತ್ತಗಳ ಲಕ್ಷಣ. (೮) ಮಾತೃಭಾಷೆಯ ಅಭಿಜಾತ ವೃತ್ತಗಳು ತ್ರಿಪದಿ, ಷಟ್ಪದಿ

೧೦ನೆಯ ತರಗತಿಯಲ್ಲಿ :—ವಾಕ್ಯ ವಿಭಜನೆಯ ಅಭ್ಯಾಸ ಮುಂದರಿಸುವುದು (೨) ಕಲಿತ ಗದ್ಯ ಪದ್ಯಗಳಲ್ಲಿಯ ಸಂಧಿ, ಸಮಾಸಗಳ ವಿವರ ಅಭ್ಯಾಸ. (೨) ಪ್ರಯೋಗಗಳ ಅಭ್ಯಾಸ ಮುಂದರಿಸುವುದು. (೪) ತತ್ಸಮ ತದ್ಭವಗಳ ವಿಚಾರ (೫) ಅನ್ಯ ಭಾಷೆಯ ಪದಗಳ ಅಭ್ಯಾಸ, ಅವುಗಳನ್ನು ಮಾತೃಭಾಷೆಗೆ ಅಳವಡಿಸಿಕೊಳ್ಳುವ ಕ್ರಮ. (೬) ಛಂದಸ್ಸಿನ ವಿವರ ಅಭ್ಯಾಸ ಕಂದ, ಸಾಂಗತ್ಯ, ಅಕ್ಷರಗಣ, ಮಾತ್ರಾಗಣಗಳ ಕಲ್ಪನೆ.

೧೧ನೆಯ ತರಗತಿಯಲ್ಲಿ — (೧) ವಾಕ್ಯದ ಸೂಕ್ಷ್ಮ ಅಭ್ಯಾಸ (೨) ಪದಗಳ ಅನ್ಯೋನ್ಯತೆಯ ವಿವರ ಅಭ್ಯಾಸ. (೩) ವಿವಿಧ ಪ್ರತ್ಯಯಗಳಿಂದ ಪದಗಳ ರಚನೆಯ ಕ್ರಮ (೪) ದ್ವಿರುಕ್ತಿ, ಅನುಕರಣವಾಚಕ ಪದಗಳ ಕಲ್ಪನೆ. (೫) ಸಮಾಸಗಳ ಅಭ್ಯಾಸ ಮುಂದರಿಸಿ, ಅವುಗಳಲ್ಲಿ ಬರುವ ಉಪಮೇಯ ಉಪಮಾನಗಳ ಕಲ್ಪನೆ. (೬) ಪಡೆನುಡಿ, ಜೋಡುನುಡಿ, ವಾಕ್ ಪ್ರಚಾರಗಳ ಅಭ್ಯಾಸ (೭) ಕೆಳಗಿನ ತರಗತಿಯಲ್ಲಿ ಅಪೂರ್ಣವಾಗಿ ಉಳಿದ ವ್ಯಾಕರಣದ ವಿವಿಧ ಅಂಗಗಳನ್ನು ಪೂರ್ಣಗೊಳಿಸಿಕೊಳ್ಳುವುದು

ಸ್ಥೂಲವಾಗಿ ಇಲ್ಲಿ ಕಾಣಿಸಿದ ಅಭ್ಯಾಸಪತ್ರಿಕೆಯಲ್ಲಿ ವ್ಯಾಕರಣದ ಪ್ರತಿಯೊಂದು ಅಂಗವು ಆರಂಭವಾಗುವಾಗ ಬೀಜರೂಪದಲ್ಲಿ ಹುಟ್ಟಿ, ಮುಂದಿನ ವರ್ಗಗಳಲ್ಲಿ ಕ್ರಮಕ್ರಮದಿಂದ ವಿಕಾಸ ಹೊಂದುತ್ತ ಹೋಗುವುದು ಶಕ್ಯವಿದ್ದಷ್ಟು 'ಸಮಕೇಂದ್ರ ಪದ್ಧತಿ' ಯನ್ನು ಅನುಸರಿಸಲಿಕ್ಕೆ ಯತ್ನಿಸಲಾಗಿದೆ. ಈ ಕ್ರಮವನ್ನು ಆರಂಭದಲ್ಲಿ ಉದ್ಗಾಮಿ ಪದ್ಧತಿಯಿಂದ ಕಲಿಸಲಿಕ್ಕೆ ಆರಂಭಿಸುವುದು ಮುಂದ ಅವಶ್ಯವೆನಿಸಿದಲ್ಲಿ ಅವಗಾಮಿ ಪದ್ಧತಿಯನ್ನು ಅದಕ್ಕೆ ಅನ್ವಯಿಸಿಕೊಳ್ಳುತ್ತ ಮುಂದೆ ನಾಗುವುದು. ಸಾಧ್ಯವಿದ್ದಷ್ಟು ವ್ಯಾಕರಣ ಪಾಠಗಳು ಮನೋರಂಜಕವಾಗುವಂತೆ ಯತ್ನಿಸುವುದು.

(೩)

ಇನ್ನು ಪ್ರತ್ಯಕ್ಷ ವ್ಯಾಕರಣವನ್ನು ಕಲಿಸುವ ವಿಧಾನದ ಬಗ್ಗೆ ಸ್ವಲ್ಪ ವಿಚಾರಿಸೋಣ ವ್ಯಾಕರಣವು ಭಾಷಾ ವಿಷಯಕ್ಕೆ ಸಂಬಂಧಿಸಿದ ಒಂದು ಶಾಸ್ತ್ರವಾಗಿದೆ ಇದನ್ನು ವಿದ್ಯಾರ್ಥಿಗಳಿಗೆ ಮನೋರಂಜಕವಾಗಿ ಕಲಿಸಬೇಕು. ಅದಕ್ಕಾಗಿ ಉದ್ಗಾಮಿ ಪದ್ಧತಿಯನ್ನು ಅನುಸರಿಸಬೇಕು ಈ ಸೂತ್ರವನ್ನು ನಾವು ಈಗ ಸ್ವೀಕರಿಸಿದಂತಾಯಿತು. ವ್ಯಾಕರಣ ಶಿಕ್ಷಣದ ಉದ್ಗಾಮಿ ಪದ್ಧತಿಯನ್ನು ನಾವು (೧) ನಿರೀಕ್ಷಣ (೨) ವಿಭಜನ (೩) ವರ್ಗೀಕರಣ (೪) ನಿಯಮ ಸಂಶೋಧನ (೫) ಜ್ಞಾನದ ಉಪಯೋಗವೆಂದು ಮೆಟ್ಟಲುಗಳನ್ನು ಮಾಡಿಕೊಂಡು ರೂಢಿಯಲ್ಲಿ ತರಲಿಕ್ಕೆ

ಬರುವುದು ಪಾಠವು ಸುಗಮವೂ ಮನೋರಂಜಕವೂ ಆಗಿ ಸಾಗಬೇಕಾದರೆ ನಿರೀಕ್ಷಣೆಗೆ ಆಯ್ದುಕೊಳ್ಳುವ ಗದ್ಯವು ಸುಂದರವಾಗಿರಬೇಕು ಅದರ ಜೊತೆಗೆ ನಾವು ಹೊರಡಿಸಬೇಕೆಂದಿರುವ ನಿಯಮಕ್ಕೆ ತಕ್ಕ ಉದಾಹರಣೆಗಳನ್ನು ಒಳಗೊಂಡಿದ್ದು ಇರಬೇಕು ಅಲ್ಲದೆ ವಿದ್ಯಾರ್ಥಿಗಳ ಭಾಷಾಜ್ಞಾನಕ್ಕೆ ಅನುಸರಿಸಿ ಇರಬೇಕಾಗುವುದು ಈ ದೃಷ್ಟಿಯಿಂದ ಮಕ್ಕಳು ಕಲಿತ ಪಠ್ಯಪುಸ್ತಕದ ಒಂದು ಪಾಠದ ವಾಕ್ಯವೃಂದವನ್ನು ನಿರೀಕ್ಷಣೆಗೆ ಆಯ್ದುಕೊಳ್ಳುವುದು ಹೆಚ್ಚು ಉತ್ತಮವಾಗಿದೆ

ಇಲ್ಲಿ ಮಕ್ಕಳ ಮನೋವೃತ್ತಿಯೊಂದನ್ನು ನಾವು ಗಮನಿಸಬೇಕು. ಒಮ್ಮೆ ನಮ್ಮ ಮನೆಯಲ್ಲಿ ಮಗು ಅಜಿತ ಆಡಲಿಕ್ಕೆ ಕಡ್ಡಿಯ ಪೆಟ್ಟಿಗೆಯನ್ನು ಬೇಡಿದ ಹಾಳು ಮಾಡುವನೆಂದು ಕೊಡದಿರಲು ಹಟವನ್ನು ಮಾಡಿದ ಅದಕ್ಕಾಗಿ ಅವನ ಕೈಗೆ ಕೊಟ್ಟೆ ಸ್ವಲ್ಪ ಹೊತ್ತು ಅದನ್ನು ಆತ ನಿರೀಕ್ಷಿಸಿದ ಸಮಾಧಾನವಾಗಲಿಲ್ಲ ತೆರೆದ ಕಡ್ಡಿಗಳನ್ನು ಸುರುವಿದ ಪೆಟ್ಟಿಗೆಯ ಭಾಗಗಳನ್ನು ವಿಭಜಿಸಿದ ಕಡ್ಡಿಗಳನ್ನು ಒತ್ತಟ್ಟಿಗೆ, ಒಳಗಿನ ದೋಣಿಯನ್ನು ಇನ್ನೊಂದೆಡೆಗೆ, ಮೇಲಿನ ಕವಚವನ್ನು ಇನ್ನೊತ್ತಟ್ಟಿಗ ಇಟ್ಟ ಸ್ವಲ್ಪ ಹೊತ್ತು ನೋಡಿದ ಮೆಲ್ಲನೆ ದೋಣಿಯಲ್ಲಿ ಕಡ್ಡಿಗಳನ್ನು ತುಂಬ ತೊಡಗಿದ ಮೊದಲಿನಂತೆ ತುಂಬಲಿಕ್ಕೆ ಆಗಲಿಲ್ಲ ಅಸ್ತವ್ಯಸ್ತವಾಯಿತು ಆದರೂ ಆ ಕಡ್ಡಿಗಳಿಂದ ತುಂಬಿದ ಒಳಗಿನ ಭಾಗ ಒತ್ತಟ್ಟಿಗೆ, ಮೇಲಿನ ಕವಚ ಇನ್ನೊಂದು ಬದಿಗೆ ಇಟ್ಟ ಈ ವರ್ಗೀಕರಣದಿಂದ ಅವನ ಮನಸ್ಸು ಸ್ವಲ್ಪ ಆನಂದಗೊಂಡಿರಬೇಕು ಮುಖದಲ್ಲಿ ಹರ್ಷದ ಲಕ್ಷಣ ಕಂಡವು. ತರುವಾಯ ಅದನ್ನು ಮೊದಲಿದ್ದಂತೆ ಕವಚದಲ್ಲಿ ಸೇರಿಸಲು ಯತ್ನಿಸ ತೊಡಗಿದ ಕೆಲವು ಕಡ್ಡಿಗಳು ಕೆಳಗೆ ಬಿದ್ದುವು ದೋಣಿ ಒಳಗೆ ವ್ಯವಸ್ಥಿತವಾಗಿ ಸೇರದಾಯಿತು ಕೆಳಗೆ ಬಿದ್ದ ಅಪವಾದಾತ್ಮಕ ಕಡ್ಡಿಗಳನ್ನಂತೂ ಲಕ್ಷ್ಯಕ್ಕೆ ತರಲಿಲ್ಲ ಮೊದಮೊದಲು ಅವುಗಳನ್ನು ಸೇರಿಸಲಿಕ್ಕೆ ಪ್ರಯತ್ನಿಸದೆ ಇರಲಿಲ್ಲ ಆದರೆ ಅದು ಸಾಧ್ಯ ಕಾಣದಿರಲು ಬಿಟ್ಟುಬಿಟ್ಟ ಅಂದರೂ ಮೊದಲಿನಂತೆ ಆಗದಿರಲು ತುಂಬ ನೊಂದುಕೊಂಡು ಯತ್ನಿಸಿದ ತನ್ನ ಬಯಕೆಯಂತೆ ಆಗಲಿಕ್ಕೆ ಬೇಕಾಗುವ ನಿಯಮವನ್ನು ಸಂಶೋಧಿಸ ಹತ್ತಿದ ಈ ಮಗ್ಗುಲಿನಿಂದೊಮ್ಮೆ ಆ ಮಗ್ಗುಲಿನಿಂದೊಮ್ಮೆ ಸೇರುವದೇನು ನೋಡ ಹತ್ತಿದ. ತನಗೆ ಇದ್ದ ಜ್ಞಾನವನ್ನು ಉಪಯೋಗಿಸಿ, ಕೆಲವು

ಹೊತ್ತಿನಲ್ಲಿ ಆ ಕಾರ್ಯವನ್ನು ಸಾಧಿಸಿದ ಆಗ ಅವನ ಮುಖದಲ್ಲಿ ಮೂಡಿದ ವಿಜಯ ಭಾವ ನೋಡುವಂದದಾಗಿತ್ತು. ಇಂಥ ಅನುಭವವನ್ನು ನಾನು ಹದಿನಾರು ಹದಿನೇಳು ವರ್ಷದವನಿದ್ದಾಗ ಒಂದು ಹಳೆಯ ಗಡಿಯ್ತಾರವನ್ನು ಬಿಚ್ಚಿ ಹೊಂದಿಸಿದಾಗಲೂ ಪಡೆದಿದ್ದೇನೆ ಅದರಿಂದ ಈ ಮನೋವೃತ್ತಿಯು ಮಕ್ಕಳ ಬೆಳವಣಿಗೆಯ ವಿವಿಧ ಹಂತಗಳಲ್ಲೂ ಇರುತ್ತದೆಂಬುದನ್ನು ಊಹಿಸಬಹುದು ಈ ಮನೋವೃತ್ತಿಯನ್ನೇ ನಮ್ಮ ವ್ಯಾಕರಣ ಪಾಠದ ತಳಹದಿಯನ್ನಾಗಿ ಉಪಯೋಗಿಸಿಕೊಳ್ಳಬೇಕು ಅಂದರ ಪಾಠದ ಆರಂಭವು ವಿಭಜನೆಯಿಂದ ಆಗಿ, ಸಂಕಲನದಿಂದ ಮುಕ್ತಾಯಗೊಳ್ಳಬೇಕು

ಈ ತತ್ವಕ್ಕನುಸರಿಸಿ ವ್ಯಾಕರಣ ಪಾಠಗಳ ಮೆಟ್ಟುಗಳ ಸ್ವರೂಪ ಸಾಮಾನ್ಯವಾಗಿ ಕೆಳಗೆ ಕಾಣಿಸಿದಂತೆ ಆಗಬಹುದು

(೧) ಪ್ರಸ್ತಾವನೆ — ಬಹಳಷ್ಟು ಉದಾಹರಣೆಗಳು ಸಿಗುವ ಒಂದು ಗದ್ಯಭಾಗವನ್ನು ಶಿಕ್ಷಕರು ಕರೀ ಹಲಿಗೆಯ ಮೇಲೆ ಬರೆಯಬೇಕು ಅದರಲ್ಲಿ ನಾವು ಹೊರಡಿಸಲಿರುವ ನಿಯಮಕ್ಕೆ ಅಪವಾದಗಳೂ ಇರಬೇಕು ಅಂದರೆ ತುಲನಾತ್ಮಕ ಅಭ್ಯಾಸಕ್ಕೆ ಅನುಕೂಲವಾಗುವುದು ಹುಡುಗರು ಆ ಗದ್ಯಭಾಗವನ್ನು ಓದಿಕೊಳ್ಳಬೇಕು. ಆಮೇಲೆ ಶಿಕ್ಷಕರು ಗದ್ಯಭಾಗವು ಮಕ್ಕಳಿಗೆ ತಿಳಿದುದನ್ನು ಅರಿತುಕೊಳ್ಳಲಿಕ್ಕೆ ಒಂದೆರಡು ಸಾಮಾನ್ಯ ಪ್ರಶ್ನೆಗಳನ್ನು ಕೇಳಬೇಕು.

(೨) ವಿವೇಚನೆ — ನಾವು ಯಾವ ನಿಯಮ ಶೋಧಿಸತಕ್ಕದೆಂಬುದರ ಸ್ಪಷ್ಟ ಕಲ್ಪನೆಯನ್ನು ಮೇಲಿನ ತರಗತಿಗಳಲ್ಲಿ ವಿದ್ಯಾರ್ಥಿಗಳಿಗೆ ಕೊಡಲಿಕ್ಕೆ ಅಡ್ಡಿಯಿಲ್ಲ ಅವರು ಭಾಷೆಯ ಶಾಸ್ತ್ರವನ್ನು ಅಭ್ಯಸಿಸುವದಿರುವದೆಂಬ ಅರಿವುಳ್ಳವರು ಇರುತ್ತಾರೆ ಕೆಳಗಿನ ತರಗತಿಗಳಲ್ಲಿ ಮಾತ್ರ ನಾವು ಹೊರಡಿಸಲಿರುವ ನಿಯಮಕ್ಕೆ ತಕ್ಕ ಉದಾಹರಣೆಗಳಾಗಬಲ್ಲ ಗದ್ಯವಿಭಾಗದ ಕಡೆಗೆ ಪ್ರಶ್ನೋತ್ತರಗಳಿಂದ ವಿದ್ಯಾರ್ಥಿಗಳ ಮನಸ್ಸನ್ನು ಸೆಳೆಯ್ಬೇಕು. ಅಂಥ ವಾಕ್ಯಗಳನ್ನು ಕರೀ ಹಲಿಗೆಯ ಮೇಲೆ ಬೇರೆಯಾಗಿಯೂ ಬರೆದಿಡಬೇಕು. ಅದರ ನಿರೀಕ್ಷಣೆಯಿಂದ, ಮಕ್ಕಳಿಂದ ನಿಯಮ ಹೊರಡಿಸಬೇಕು. ಅವರು ಹೇಳುವ ಹರಕು-ಮುರುಕು ಮಾತುಗಳಲ್ಲಿಯ ನಿಯಮ

ವನ್ನೂ ಕರೀ ಹಲಿಗೆಯ ಮೇಲೆ ಬರೆಯಲಿಕ್ಕೆ ಹಚ್ಚಬೇಕು ಆಮೇಲೆ ಶಿಕ್ಷಕರು ಅದನ್ನು ತಿದ್ದಿ, ಸರಿವಡಿಸಬೇಕು. ಆದರೆ ಅದು ಮಕ್ಕಳಿಂದ ಹೊರಟ ನಿಯಮದಿಂದ ಬಹಳ ದೂರ ಹೋಗಿರಬಾರದು ವ್ಯಾಕರಣದ ಪಾರಿಭಾಷಿಕ ಪದಗಳನ್ನು ಹೇಳುವಾಗಲೂ ಸಹ ಸುಲಭ ಪದಗಳಿಂದ ಕಠಿಣ ಪದಗಳತ್ತ ಸಾಗಬೇಕು

(೩) ಪುನರವಲೋಕನ:— ವಿದ್ಯಾರ್ಥಿಗಳಿಂದ ಶೋಧಿಸಲ್ಪಟ್ಟ, ಶಿಕ್ಷಕರಿಂದ ಸುಧಾರಿಸಲ್ಪಟ್ಟ ನಿಯಮವನ್ನೂ ಮಕ್ಕಳು ಸಾಮೂಹಿಕವಾಗಿ ಒಂದೆರಡು ಸಲ ಅನ್ನಬೇಕು ಆಮೇಲೆ ಆ ನಿಯಮಕ್ಕೆ ಅನ್ವಯಿಸುವ ಉದಾಹರಣೆಗಳನ್ನು ಮಕ್ಕಳಿಂದ ಕೇಳಿಕೊಳ್ಳಬೇಕು ಆಗ ಹೊರಟ ಅಪವಾದಾತ್ಮಕ ವಿವರಗಳನ್ನು ವಿವೇಚಿಸಿ, ನಿಯಮವನ್ನು ಸ್ಪಷ್ಟಗೊಳಿಸಬೇಕು ಇದರಿಂದ ಅವರು ಕಲಿತ ಜ್ಞಾನವು ಸ್ಥಿರಗೊಳ್ಳುವುದು ವಿಕಲ್ಪಗಳು ದೂರವಾಗುವವು ಇದಕ್ಕಾಗಿ ವಿವಿಧ ಮಾದರಿಯ ಅಭ್ಯಾಸಗಳನ್ನು ಶಿಕ್ಷಕರು ಬಹು ಕೌಶಲ್ಯದಿಂದ ಆಯ್ದುಕೊಂಡು, ಪೂರ್ವಸಿದ್ಧತೆಯಿಂದ ಕಲಿಸಲಿಕ್ಕೆ ಬಂದಿರಬೇಕಾಗುವುದು ಅಂದರೆ ಶಿಕ್ಷಣ ಕಾರ್ಯವು ಯಶಸ್ವಿಯಾಗಿ ನೆರವೇರುವುದು.

(೪) ಗೃಹಪಾಠ — ತಾವು ಕಲಿತ ವ್ಯಾಕರಣ ನಿಯಮವನ್ನು ಅನುಸರಿಸುವ ಉದಾಹರಣೆಗಳನ್ನು ಪಠ್ಯಪುಸ್ತಕದೊಳಗಿಂದ ಆಯ್ದುಕೊಂಡು ಬರೆದು ತರುವುದು

ಈ ಪ್ರಕಾರ ವ್ಯಾಕರಣದ ಶಿಕ್ಷಣವು ಸಾಗಿದರೆ ವಿದ್ಯಾರ್ಥಿಗಳಿಗೆ ಬೇಸರ ಹುಟ್ಟುವದಿಲ್ಲ ಒಂದು ಮನೋಹರವಾದ ಆಟದಂತೆ ಪಾಠಗಳು ನಡೆಯುವವು ಅಲ್ಲದೆ ವಿವಿಧ ಉದಾಹರಣೆ, ಅಭ್ಯಾಸ, ಗೃಹಪಾಠ ಮೊದಲಾದವುಗಳಿಂದ ವಿದ್ಯಾರ್ಥಿಗಳ ಭಾಷಾಭ್ಯಾಸದ ಕ್ಷೇತ್ರವು ವಿಸ್ತರಿಸುವುದು. ವಾಙ್ಮಯ ಪರಿಚಯವೂ ಬೆಳೆಯುವುದು ಅದರಿಂದ ಅವರ ಬರಹಗಳೂ ಸುಧಾರಿಸುವವು ಬರಹದಲ್ಲಿ ವಿವಿಧ ಚಮತ್ಕೃತಿಗಳನ್ನೂ ವಿದ್ಯಾರ್ಥಿಗಳು ತಮ್ಮ ವ್ಯಾಕರಣ ಜ್ಞಾನವನ್ನು ಪ್ರಯೋಗಿಸಿ ತೋರಿಸಬಹುದು ಈ ಪ್ರಯತ್ನಕ್ಕೆ ತೊಡಗಿದಾಗ ವಿದ್ಯಾರ್ಥಿಗಳಿಗೆ ಅದೊಂದು ಕ್ರೀಡೆಯೆನಿಸುವುದು. ಹೀಗೆ ಪಾಠವೊಂದು ಆಟವೆನಿಸುವುದರಲ್ಲಿಯೇ ಶಿಕ್ಷಣದ ಯಶಸ್ಸು ಇದೆ.

# ೯. ಓದು-ಬರಹಗಳನ್ನು ಕಲಿಸುವುದು

" ವ್ಯವಹಾರ ಮಾಡುವಷ್ಟು ಓದು-ಬರಹ ಬಂತು, ಹುಡುಗನನ್ನು ಶಾಲೆಯಿಂದ ತೆಗೆದು ಉದ್ಯೋಗಕ್ಕೆ ಹಚ್ಚಿದೆ "

ಎಂದು ಹಳ್ಳಿ ಹಳ್ಳಿಗಳಲ್ಲಿ ಸಾಮಾನ್ಯವಾಗಿ ಹೇಳುವದುಂಟು ಇಲ್ಲಿ, ಶಿಕ್ಷಣದ ಧ್ಯೇಯ ಓದು-ಬರಹವೆಂಬುದು ಜನರ ಭಾವನೆಯಾಗಿರುತ್ತದ ಇತಿಹಾಸ, ಭೂಗೋಲ ಇತ್ಯಾದಿ ವಿಷಯಗಳು ಮಕ್ಕಳಿಗೆ ಎಷ್ಟು ಬರುತ್ತವೆಂಬುದನ್ನು ಅವರು ಗಮನಿಸುವದಿಲ್ಲ ಅವರಿಗೆ ಓದು ಬರಹ ಮುಖ್ಯ ಅದೇ ಅವರ ಜೀವನಕ್ಕೊಂದು ಸಾಧನ, ಉದ್ಯೋಗದ ಜೀವಾಳ ಇಂಥ ಓದು-ಬರಹಕ್ಕೆ ಭಾಷಾ ಶಿಕ್ಷಣದಲ್ಲಿ ಒಹಳ ಮಹತ್ವದ ಸ್ಥಾನವಿದೆ. ಓದು ಗ್ರಹಣವಾಗಿದ್ದರೆ ಬರಹ ನಿವೇದನವೆನಿಸುತ್ತದೆ

ಮಕ್ಕಳಿಗೆ ಓದು ಬರಹವನ್ನು ಕಲಿಸಲು ಹೇಗೆ ಆರಂಭಿಸಬೇಕೆಂಬುದನ್ನು ಹಿಂದೆ ವಿವರಿಸಲಾಗಿದೆ ಇಲ್ಲಿ ಓದು-ಬರಹವನ್ನು ಪ್ರಬುದ್ಧಗೊಳಿಸುವ ವಿಧಾನಗಳನ್ನು ಸ್ಥೂಲವಾಗಿ ವಿವೇಚಿಸಲು ಯತ್ನಿಸಲಾಗುತ್ತಿದೆ ಯಾಕಂದರೆ ಈ ಓದು-ಬರಹಗಳೆಂಬಿವು ವ್ಯಕ್ತಿಯ ಜೀವನದುದ್ದಕ್ಕೂ ವಿಕಾಸ ಹೊಂದುತ್ತ ಇರುವಂಥ ವಿಷಯಗಳು ಶಾಲೆಯ ಜೀವನದೊಡನೆ ಇವು ಮುಗಿಯುವದಿಲ್ಲ ಇಷ್ಟೇ ಅಲ್ಲ, ಜನಸಾಮಾನ್ಯರು ತಿಳಿದುಕೊಳ್ಳುವಂತೆ ಹೊಟ್ಟೆಯ ಉದ್ಯೋಗಕ್ಕೆ ಸಹಾಯವಾಗುವಷ್ಟಕ್ಕೆ ಓದು-ಬರಹದ ಕಾರ್ಯ ಮುಗಿಯಿತೆಂದಲ್ಲ ಹೊಟ್ಟೆಯನ್ನು ತುಂಬಿಕೊಳ್ಳುವದೊಂದೇ ಜೀವನದಲ್ಲಿ ಪರಿಪೂರ್ಣತೆ ಎನಿಸುವುದಿಲ್ಲ ಮಾನವ ಜೀವನಕ್ಕೆ ಅದಕ್ಕೂ ಹೆಚ್ಚಿನ ಉದ್ದೇಶವಿದೆ ಆದಕ್ಕಾಗಿ ವ್ಯಕ್ತಿಗಳ ಓದು-ಬರಹದ ಶಕ್ತಿಯು ವಿಕಾಸ ಹೊಂದುವುದು ಅತ್ಯವಶ್ಯವಾಗಿದೆ

ಮಾನವನಿಗೆ ಜ್ಞಾನ, ಆನಂದಗಳನ್ನು ಒದಗಿಸುವುದು ವಾಚನದಿಂದ ಸಾಧ್ಯವಿದೆ ವಿವಿಧ ವಿಷಯಗಳ ಗ್ರಂಥಗಳು ಜ್ಞಾನನಿಧಿಯನ್ನು ವಾಚಕರಿಗೆ ಒಪ್ಪಿಸುವವು ಲಲಿತ ವಾಙ್ಮಯವು ಆನಂದವನ್ನು ನೀಡುವುದು ಭಾಷಾ ಶಿಕ್ಷಣದ ಮಹತ್ವದ ಉದ್ದೇಶವಾದ ಈ ಓದುವಿಕೆಯಲ್ಲಿ ಸಾಮಾನ್ಯವಾಗಿ

ಎರಡು ವಿಭಾಗಗಳನ್ನು ಕಲ್ಪಿಸಬಹುದು ೧) ಮುಖದಿಂದ ಧ್ವನಿ ಹೊರಡುವಂತೆ ಓದುವುದು ೨) ಮೌನವಾಗಿ ಓದುವುದು ಕೆಳಗಿನ ತರಗತಿಗಳಲ್ಲಿ ಶಾಲೆಯ ವಾಚನವು ಒದರಿ ಓದುವುದೇ ಹೆಚ್ಚಾಗಿರುತ್ತದೆ ಆದರಿಂದ ಉಚ್ಚಾರ ಶುದ್ಧತೆ, ಧ್ವನಿಗಳ ಏರಿಳಿವುಗಳ ಕಡೆಗ ಶಿಕ್ಷಕರು ಲಕ್ಷ ಪೂರೈಸಲಿಕ್ಕೆ ಆಗುವುದು ಅಕ್ಷರಗಳ ಪರಿಚಯ, ಪದಗಳ ಜ್ಞಾನ ಹೆಚ್ಚುತ್ತ ಹೋದಂತೆ ಮುಖದಕಿಂತ ಕಣ್ಣುಗಳು ಒತ್ತರದಿಂದ ಕಾರ್ಯ ಮಾಡ ಹತ್ತಲು, ಉಚ್ಚಾರವು ತನ್ನಿಂದ ತಾನೇ ನಿಂತು, ಮೌನವಾಚನವು ಮುಂದರಿಯುತ್ತದೆ ನಾವು ಕೀರ ಕೆಳಗಿನ ತರಗತಿಗಳಲ್ಲಿ ಧ್ವನಿಮಾಡಿ ಓದುವದೊಂದೇ ರೂಢಿಯಲ್ಲಿರುತ್ತದೆಂದು ಭಾವಿಸಿದರೆ ತಪ್ಪಾಗುವುದು ಆರಂಭದಲ್ಲಿ ಅಕ್ಷರಗಳನ್ನು ಹೊಂದಿಸಿ ಪದಗಳನ್ನು ಕಂಡು ಹಿಡಿಯಲು ಚಿಕ್ಕ ಮಕ್ಕಳು ಮೊದಲು ಮನಸ್ಸಿನಲ್ಲಿ ಒದಿಕೊಂಡ ತರುವಾಯವೇ ಒಟ್ಟಿಗ ಪದವನ್ನು ಉಚ್ಚರಿಸುತ್ತಾರೆ ಆದರಂತೆ ಶಿಕ್ಷಕರು ಕರಿಯ ಹಲಿಗಯ ಮೇಲೆ ವಾಕ್ಯಗಳನ್ನೂ ಶಬ್ದಗಳನ್ನೂ ಬರೆಯುವಾಗ ಮಕ್ಕಳು ಕುಳಿತಲ್ಲಿಂದ ಮೌನವಾಗಿದ್ದು, ಓದಿಕೊಳ್ಳುವ ಅಭ್ಯಾಸ ಇರುತ್ತದೆ, ಇವೆಲ್ಲ ಮೌನವಾಚನದ ಆರಂಭದ ಹೆಜ್ಜೆಗಳಾಗಿವೆ

ಮೌನವಾಚನದಿಂದ ಅನೇಕ ಲಾಭಗಳಿವೆ. ವೇಳೆಯ ಉಳಿತಾಯವಾಗುವುದು ತುಸು ಹೊತ್ತಿನಲ್ಲಿ ಹೆಚ್ಚು ಓದುವುದು ಇದರಿಂದ ಸಾಧ್ಯವಿದೆ ಪ್ರತಿಯೊಬ್ಬ ವಿದ್ಯಾರ್ಥಿಗೆ ತನ್ನ ಶಕ್ತಿಗೆ ಅನುಸರಿಸಿ, ಪ್ರಗತಿಯನ್ನು ಸಾಧಿಸಿಕೊಳ್ಳಲಿಕ್ಕೆ ಅನುವು ಸಿಗುವುದು ಅರ್ಥಗ್ರಹಣವು ಸುಲಭವಾಗುವುದು ಈ ಎಲ್ಲ ಸಂಗತಿಗಳನ್ನು ಗಮನಿಸಿ, ಶಿಕ್ಷಕರು ಮಕ್ಕಳ ಮೌನವಾಚನಕ್ಕೆ ಪ್ರೋತ್ಸಾಹ ನೀಡಬೇಕು ಆದರ ವಾಚನದ ಈ ಎರಡೂ ಪ್ರಕಾರಗಳು ಭಾಷಾ ಶಿಕ್ಷಣಕ್ಕೆ ಅತ್ಯವಶ್ಯವಾಗಿವೆ ಯಾವ ರೀತಿಯಿಂದ ಯಾವಾಗ ಓದಿಸಬೇಕೆಂಬುದನ್ನು ಶಿಕ್ಷಕರು ಆಲೋಚಿಸಿ ನಿರ್ಣಯಿಸಬೇಕು

* * * * *

ವಾಚನವು ಮಕ್ಕಳ ಆತ್ಮವಿಕಾಸಕ್ಕೆ ಪೋಷಕವಾಗುತ್ತ ಹೋಗುತ್ತದೆ. ಈ ಆತ್ಮವಿಕಾಸಕ್ಕೆ ಆತ್ಮಾವಿಷ್ಕಾರದ ಅವಶ್ಯಕತೆಯಿದೆ ಇದು ಭಾಷಣ

ದಿಂದ ಸಾಧಿಸುವಂತೆ ಬರವಣಿಗೆಯಿಂದಲೂ ಸಿದ್ಧಿಸುತ್ತದೆ ಆದಕ್ಕಾಗಿ ಭಾಷಾ ಶಿಕ್ಷಣದಲ್ಲಿ ವಿದ್ಯಾರ್ಥಿಗಳ ಲೇಖನ ಶಕ್ತಿಯ ವಿಕಾಸಕ್ಕೆ ಬಹಳ ಮಹತ್ವವಿದೆ.

ನಮ್ಮ ಮನಸ್ಸಿನೊಳಗಿನ ವಿಚಾರವು ಎರಡನೆಯವರಿಗೆ ತಿಳಿಯುವುದಕ್ಕಾಗಿ ಮಾತನಾಡುವ ಅವಶ್ಯಕತೆ ಇದ್ದಂತೆ ಲೇಖನ ಬರಹದ ಅವಶ್ಯಕತೆಯೂ ಇದೆ ಕೇವಲ ವ್ಯವಹಾರಕ್ಕೆ ತಕ್ಕಷ್ಟು, ಪತ್ರ, ಅರ್ಜಿಗಳನ್ನು ಬರೆಯುವದಷ್ಟೇ ಭಾಷಾಭ್ಯಾಸದ ಫಲವೆಂದರೆ ಅದು ತೀರ ಸಂಕುಚಿತ ವಿಚಾರವೆನಿಸುವುದು ಇಂದಿನ ವಿಶಾಲ ವ್ಯವಹಾರಕ್ಕೆ ವರ್ತಮಾನ ಪತ್ರಗಳ ಪ್ರಕಟಣೆ, ಸುದ್ದಿಗಳನ್ನು ಪತ್ರಿಕೆಗಳಿಗಾಗಿ ಬರೆಯುವುದು, ಆಕರ್ಷಕ ಭಾಷೆಯಲ್ಲಿ ತನ್ನ ವಿಚಾರಗಳನ್ನು ಜನರ ಮುಂದಿಟ್ಟು, ತನ್ನ ಕಡೆಗೆ ಜನರ ಮನವನ್ನು ಸೆಳೆದು ಕೊಳ್ಳುವುದು ನಿತ್ಯದ ವ್ಯವಹಾರದಲ್ಲಿಯೇ ಸಮಾವೇಶವಾಗುತ್ತದೆ ಆದರೆ ಇಲ್ಲಿಯೇ ಲೇಖನದ ಸೀಮೆಯು ಮುಗಿಯಲಿಲ್ಲ ವಿದ್ಯಾರ್ಥಿಗಳು ಉತ್ತಮ ವಾಙ್ಮಯದ ಸೌಂದರ್ಯವನ್ನೂ ಕಲಾತ್ಮಕ ಗುಣವನ್ನೂ ಗುರುತಿಸಿ, ಆನಂದವನ್ನು ಅನುಭವಿಸಬೇಕು ಅಲ್ಲದೆ ಅದನ್ನು ತಮ್ಮ ಬರಹಗಳಲ್ಲಿ ವ್ಯಕ್ತ ಪಡಿಸಲಿಕ್ಕೆ ಸಮರ್ಥರಾಗಬೇಕು ಈ ದೃಷ್ಟಿಯಿಂದಲೇ ಭಾಷಾಭ್ಯಾಸದಲ್ಲಿ ಹಿಂದೆ ಸಾಹಿತ್ಯಾಭ್ಯಾಸದ ಸಲುವಾಗಿ ಕೆಲವು ಮಾತುಗಳನ್ನು ಸೂಚಿಸಿದ್ದೇವೆ.

ಇನ್ನು ವಾಚನದಲ್ಲಿಯೂ ಮಾತುಗಾರಿಕೆಯಲ್ಲಿಯೂ ಯಾವ ಪ್ರಕಾರ ಧ್ವನಿಯ ಏರಿಳಿವು, ಉಚ್ಚಾರದ ಸ್ಪಷ್ಟತೆ ಮೊದಲಾದ ಗುಣಗಳ ಅವಶ್ಯಕತೆ ಇರುತ್ತದೆಯೋ ಅದೇ ಪ್ರಕಾರ ಬರಹಕ್ಕಾದರೂ ಕೆಲವು ಗುಣಗಳ ಅವಶ್ಯಕತೆಯಿದೆ ಬರಹವು ಮೊದಲು ವ್ಯಾಕರಣ ದೃಷ್ಟಿಯಿಂದ ಶುದ್ಧವಾಗಿರಬೇಕು ಶಬ್ದ ಪ್ರಯೋಗದಲ್ಲಿ ಆಯ್ಕೆ ಹಾಗೂ ಅವುಗಳ ಅರ್ಥದ ತಾರತಮ್ಯ ಜ್ಞಾನವನ್ನು ಅರಿತು ಉಪಯೋಗಿಸುವಿಕೆ ಇರಬೇಕು ಆಮೇಲೆ ವಿಚಾರಗಳ ಸುಸಂಗತಿ, ಅವು ತರ್ಕಪೂರ್ಣವಾಗಿ ಬೆಳೆದ ರೀತಿಗಳು, ಲೇಖನದ ಗುಣವನ್ನು ಹೆಚ್ಚಿಸುವ ಸಂಗತಿಗಳಾಗಿವೆ. ಅಲ್ಲದೆ ಬರಹದ ಶೈಲಿಯು ವಿಷಯಗಳಿಗೆ ಅನುಗುಣವಾಗಿ ವ್ಯತ್ಯಾಸ ಹೊಂದುತ್ತ ಹೋಗಬೇಕು. ಆಕರ್ಷಕವೂ ಆಗಿರಬೇಕು ಈ ಎಲ್ಲ ಗುಣಗಳನ್ನು ಪ್ರಯತ್ನ ಪೂರ್ವಕ

ವಿದ್ಯಾರ್ಥಿಗಳು ತಮ್ಮ ಬರಹದಲ್ಲಿ ತಂದುಕೊಳ್ಳಲಿಕ್ಕೆ ಯತ್ನಿಸಬೇಕಾಗುವುದು ಈ ಪ್ರಯತ್ನಕ್ಕೆ ಭಾಷಾ ಶಿಕ್ಷಕನು ಸಹಾಯಕನಾಗಿ ನಿಲ್ಲಬೇಕಾಗುವುದು

ನಮ್ಮಲ್ಲಿ ಎಲ್ಲ ವಿದ್ಯಾರ್ಥಿಗಳನ್ನೂ ಉತ್ತಮ ಲೇಖಕರನ್ನಾಗಿಯೇ ಮಾಡಿತೀರಬೇಕೆಂಬ ಉದ್ದೇಶವೇನಿಲ್ಲ ಆದರೆ ವಿದ್ಯಾರ್ಥಿಗಳು ತಮ್ಮ ಆತ್ಮಾವಿಷ್ಕಾರಕ್ಕೆ ತಕ್ಕಷ್ಟು ಬರಹವನ್ನು ಅವರು ಬರೆಯಲಿಕ್ಕೆ ಸಮರ್ಥರಾಗಲಿಕ್ಕೆ ಬೇಕು ಇಷ್ಟು ಹನ್ನೊಂದು ವರ್ಷಗಳ ಶಾಲೆಯ ಭಾಷಾಶಿಕ್ಷಣದಿಂದ ಸಾಧಿಸಿದರೆ ಎಷ್ಟೋ ಸಫಲತೆಯನ್ನು ಹೊಂದಿದಂತಾಗುವುದು ಈ ಗುರಿಯನ್ನು ಮುಟ್ಟುವಂತೆ ಒಂದು ಕ್ರಮಬದ್ಧವಾದ ಅಬ್ಯಾಸದ ಯೋಜನೆಯನ್ನು ಬಾಷಾಶಿಕ್ಷಣದಲ್ಲಿ ಇಟ್ಟುಕೊಳ್ಳುವುದು ಕ್ರಮ ಪ್ರಾಪ್ತವಾಗಿದೆ

ಪ್ರಾಥಮಿಕ ಶಾಲೆಯ ಕೆಳಗಿನ ನಾಲ್ಕು ತರಗತಿಗಳಲ್ಲಿ ವಿದ್ಯಾರ್ಥಿಗಳಿಗೆ ಲೇಖನ ಕೆಲಸವು ತೀರ ಸ್ವಲ್ಪವಾಗಿರುತ್ತದೆ ಆದರೆ ಬರಹದ ಆರಂಭದ ಈ ಅವಸ್ಥೆಯು ಅತ್ಯಂತ ಮಹತ್ವದ್ದು ಆಗಿದೆ (೧) ಕರಿಯ ಹಲಿಗೆಯ ಮೇಲ ಬರೆದ ನಾಲ್ಕು ವಾಕ್ಯಗಳನ್ನು ನೋಡಿ ಬರೆಯುವುದು. (೨) ಪುಸ್ತಕಗಳಲ್ಲಿಯ ಎರಡು ಮೂರು ಸಾಲುಗಳನ್ನು ಪಾಟಿಯ ಮೇಲೆ ಬರೆಯುವದರಿಂದ ಮಕ್ಕಳ ಬರಹ ಮೊದಲನೆಯ ತರಗತಿಯಲ್ಲಿ ಆರಂಭವಾಗುತ್ತದೆ ಅದು ಮುಂದಿನ ವರ್ಗದಲ್ಲಿ ವಿಕಾಸಹೊಂದುವದು. (೩) ಕೇಳಿದ ಪ್ರಶ್ನೆಗಳಿಗೆ ಪೂರ್ಣವಾಕ್ಯಗಳಲ್ಲಿ ಹೇಳಿದ ಉತ್ತರಗಳನ್ನು ಬರೆದು ತೋರಿಸುವ ಮಟ್ಟಿಗೆ ಬೆಳೆಯುತ್ತದೆ. (೪) ಇನ್ನು ಮುಂದೆ ಮೂರು ನಾಲ್ಕನೆಯ ತರಗತಿಗಳಲ್ಲಿ ಅಂದರೆ ನೋಡಿದ ಸಂಗತಿಯನ್ನು ಕುರಿತು ಹತ್ತು ವಾಕ್ಯಗಳನ್ನು ಬರೆಯುವ ಸಾಮರ್ಥ್ಯವನ್ನು ಮಕ್ಕಳು ಪಡೆಯುತ್ತಾರೆ (೫) ಈಗ ಚಿಕ್ಕ ಚಿಕ್ಕ ವರ್ಣನಗಳನ್ನು ಅವರು ಬರೆಯಲು ಶಕ್ತರಾಗುವರು. (೬) ತಮ್ಮ ಬರಹದಲ್ಲಿ ಪೂರ್ಣವಿರಾಮ, ಪ್ರಶ್ನಾರ್ಥಕ ಚಿನ್ಹಗಳನ್ನು ಉಪಯೋಗಿಸುವ ಜ್ಞಾನವನ್ನು ಪಡೆದಿರುವರು

ಇನ್ನು ಪ್ರಾಥಮಿಕ ಶಾಲೆಗಳಲ್ಲಿ, ಮೇಲಿನ ತರಗತಿಗಳಲ್ಲಿ ಮಕ್ಕಳು ಪ್ರವೇಶಿಸಿದಂತೆ ಬರಹದ ಶಿಕ್ಷಣವು ಹೆಚ್ಚು ವಿಸ್ತಾರವಾಗಿಯೂ ವಿವೇಚ-

ನಾತ್ಮಕವಾಗಿಯೂ ವಿವಿಧ ಮಾದರಿಗಳಲ್ಲಿ ಮುಂದರಿಯಬೇಕಾಗುತ್ತದೆ. (೧) ಐದನೆಯ ತರಗತಿಗೆ ಕಾಲಿರಿಸಿದ ವಿದ್ಯಾರ್ಥಿಯು ಚೆನ್ನಾಗಿ ಪತ್ರ ಬರೆಯಲಿಕ್ಕೆ ಕಲಿಯಬೇಕಾಗುತ್ತದೆ (೨) ಅದರಂತೆ ತಾನು ನೋಡಿದ ಸ್ಥಳ, ಪ್ರಾಣಿ, ಸಂಗತಿಗಳನ್ನು ಸುಸಂಬದ್ಧವಾಗಿ, ಸ್ವಲ್ಪದರಲ್ಲಿಯಾದರೂ ಶುದ್ಧವಾಗಿ ವರ್ಣಿಸಲು ಸಮರ್ಥನಾಗಬೇಕು (೩) ಅದಲ್ಲದೆ ಚಿಕ್ಕ ಚಿಕ್ಕ ಘಟನೆಗಳಿಂದ ಕಲ್ಪಿತ ಕಥೆಯನ್ನು ಕಟ್ಟಿ ಬರೆಯಲೂ ಕಲಿತು ಕೊಳ್ಳಬೇಕು ಇದೇ ಬಗೆಯ ವಿಷಯಗಳು ಮುಂದೆ ಆರನೆಯ ತರಗತಿಗಳಲ್ಲಿ ಇನ್ನೂ ವಿಸ್ತಾರ ಹೊಂದುತ್ತವೆ (೪) ಅಲ್ಲಿ ಪರಿಚ್ಛೇದಗಳ ರಚನೆಯ ಬಗ್ಗೆ ಸಾಮಾನ್ಯ ಕಲ್ಪನೆಯನ್ನು ವಿದ್ಯಾರ್ಥಿಗಳಿಗೆ ತಂದು ಕೊಡಬಹುದು (೫) ಆತ್ಮಕಥೆ, ಸಂವಾದಗಳನ್ನು ಬರೆಯಿಸಲಿಕ್ಕೆ ಇಲ್ಲಿಯೇ ಆರಂಭಿಸಬಹುದು (೬) ವಿದ್ಯಾರ್ಥಿಯು ಬರೆಯುವ ವರ್ಣನೆಗಳಲ್ಲಿ ನಿರೀಕ್ಷಣ, ಸೂಕ್ಷ್ಮತೆಗಳು ಹೆಚ್ಚುವಂತೆ ಶಿಕ್ಷಕರು ಯತ್ನಿಸಬೇಕು. (೭) ಕಥೆಯ ಅಂಶಗಳನ್ನು ಕೊಟ್ಟರೆ ಪೂರ್ಣ ಕಥೆಯನ್ನು ಕಲ್ಪಿಸಿ, ವಿಸ್ತರಿಸಿ ಬರೆಯಲು ವಿದ್ಯಾರ್ಥಿಯು ಕಲಿತುಕೊಳ್ಳಬೇಕು. (೮) ಪರಿಚಿತರ ಕೂಡ ಮಾಡುವ ಪತ್ರವ್ಯವಹಾರದ ರೂಪರೇಷೆಯನ್ನು ವಿದ್ಯಾರ್ಥಿಗಳು ಅರಿತುಕೊಳ್ಳಬೇಕು ಮುಂದೆ ಏಳನೆಯ ತರಗತಿಯು ಶಿಕ್ಷಣದಲ್ಲಿ ಒಂದು ಮೈಲುಗಲ್ಲಿನಂತೆ ಇರುತ್ತದೆ ಅಲ್ಲಿ ಓದಿ, ಮುಂದರಿಯುವ ವಿದ್ಯಾರ್ಥಿಗಳು ಮಾಧ್ಯಮಿಕ ಶಾಲೆಗಳಲ್ಲಿ ಪ್ರವೇಶಿಸುವವರಿರುತ್ತಾರೆ ಅದರಿಂದ ಅವರ ಭಾಷಾಭ್ಯಾಸದ ಸಿದ್ಧತೆಯು ಇನ್ನೂ ಹೆಚ್ಚಬೇಕಾಗುತ್ತದೆ ಅದಕ್ಕಾಗಿ (೯) ವಿವಿಧ ಮಾದರಿಯ ಪತ್ರ-ವ್ಯವಹಾರ, ಸರಕಾರಿ ಕೆಲಸಗಳಿಗಾಗಿ ಬರೆಯಬೇಕಾದ ಅನೇಕ ಮಾದರಿಯ ಅರ್ಜಿ, ರಿಪೋರ್ಟುಗಳನ್ನೆಲ್ಲ ಬರೆಯಲು ವಿದ್ಯಾರ್ಥಿಗಳು ಈ ವರ್ಗದಲ್ಲಿ ಕಲಿತುಕೊಳ್ಳಬೇಕಾಗುತ್ತದ (೧೦) ಅದರಂತ ಗದ್ಯಭಾಗವನ್ನು ಸಂಗ್ರಹಿಸಲಿಕ್ಕೂ ವಿಚಾರಗಳನ್ನು ವಿಸ್ತರಿಸಲಿಕ್ಕೂ ಬಲ್ಲವರಾಗಬೇಕು (೧೧) ಅಪೂರ್ಣ ಕಥೆಯನ್ನು ಪೂರ್ಣಗೊಳಿಸುವುದು (೧೨) ಪರಿಚ್ಛೇದಗಳ ಆರಂಭ ಅಂತ್ಯಗಳನ್ನು ಅರ್ಥಪೂರ್ಣವಾಗಿ ರಚಿಸುವುದು (೧೩) ಪ್ರವಾಸ, ತಮ್ಮ ಅನುಭವ, ನೋಡಿದ ಪ್ರಸಂಗಗಳನ್ನು ವರ್ಣಿಸುವುದು (೧೪) ವ್ಯಕ್ತಿ ಚಿತ್ರಗಳನ್ನೂ

ಚರಿತ್ರೆಗಳನ್ನೂ ಬರೆಯುವುದು (೧೫) ಸಣ್ಣ ಕಥೆಯನ್ನು ಸಂವಾದಕ್ಕೆ ಪರಿವರ್ತಿಸುವುದು (೧೬) ಸ್ವತಂತ್ರವಾಗಿ ಸಂವಾದಗಳನ್ನು ರಚಿಸುವುದು ಇವೇ ಮೊದಲಾದ ಬರಹದ ವಿಷಯಗಳು ಈ ವರ್ಗದಲ್ಲಿ ವಿದ್ಯಾರ್ಥಿಗಳಿಗೆ ಕಲಿಸಲ್ಪಡಬೇಕು

ಈಗ ಒಮ್ಮೆಲೇ ವಿದ್ಯಾರ್ಥಿಗಳು ಹಾಯಸ್ಕೂಲಿನ ಮೇಲಿನ ತರಗತಿಗೇನೇ ಸೇರುವರು ಮುಂದೆ ನಾಲ್ಕು ವರ್ಷಗಳ ಶಿಕ್ಷಣ ಉಳಿಯುವುದು ಆಷ್ಟಾದರೆ ಮಾಧ್ಯಮಿಕ ಶಿಕ್ಷಣವು ಪೂರ್ಣಗೊಳ್ಳುವುದು ಇದನ್ನು ಗಮನಿಸಿ ಭಾಷಾಶಿಕ್ಷಣದಲ್ಲಿ ಓದು-ಬರಹಗಳ ಶಿಕ್ಷಣ-ರೀತಿಯು ನಡೆಯಬೇಕು ಅದಕ್ಕಾಗಿ ಹಾಯಸ್ಕೂಲಿನ ನಾಲ್ಕು ಐದನೆಯ ತರಗತಿಗಳಲ್ಲಿ — ಈಗ ಎಂಟು ಒಂಭತ್ತನೆಯ ವರ್ಗಗಳೆಂದೂ ಇವುಗಳಿಗೆ ಹೇಳಲಾಗುವುದು — ಕಲಿಸಲ್ಪಡುವ ಲೇಖನ ವಿಷಯದ ಅಭ್ಯಾಸಪತ್ರಿಕೆಯು ರೂಪರೇಷೆಯು ಸ್ಥೂಲವಾಗಿ ಹೀಗಿರಬೇಕಾಗುತ್ತದೆ — (೧) ವರ್ತಮಾನಪತ್ರಕ್ಕೆ ಪ್ರಕಟನೆಯನ್ನು ಸಿದ್ಧಗೊಳಿಸುವುದು ಅದರಂತೆ ಬಂದ ಪ್ರಕಟನಗೆ ಉತ್ತರಗಳನ್ನು ಬರೆಯುವುದು. (೨) ಚರಿತ್ರಾತ್ಮಕ ಹಾಗೂ ಚರ್ಚಾತ್ಮಕ ವಿಷಯಗಳಿಂದ ನಿಬಂಧ ರಚಿಸುವುದು (೩) ಹಿಂದೀ ಭಾಷೆಯ ಸುಲಭ ಗದ್ಯಗಳ ಅನುವಾದ (೪) ಸ್ವಭಾವ ಚಿತ್ರಣಗಳುಳ್ಳ ಕಿರುಗತೆಗಳನ್ನು ಬರೆಯುವುದು (೫) ಅನುಭವ ಕಥನದ ರೂಪದಲ್ಲಿರುವ ನಾಟ್ಯಛಾಯಾಗಳನ್ನು ನಿರ್ಮಿಸುವುದು. (೬) ಒಂದೇ ವಸ್ತುವನ್ನು ತಕ್ಕೊಂಡು ನಿಬಂಧ, ಸಂವಾದ, ಕಥೆಗಳ ರೂಪದಲ್ಲಿ ಬರೆಯುವುದು (೭) ಪಠ್ಯ-ಪುಸ್ತಕದೊಳಗಿನ ಗದ್ಯ-ಪದ್ಯಗಳನ್ನು ವಿಮರ್ಶಿಸುವುದು ಅವುಗಳ ರಸ ಸವಿಯುವುದು. (೮) ಪ್ರಸಿದ್ಧ ಕವಿಗಳ ಪ್ರಸಿದ್ಧ ಕವಿತೆಗಳನ್ನು ಅನುಕರಣ ಮಾಡಿ, ಕವನ ಕಟ್ಟುವದು. ಇವೇ ಮೊದಲಾದ ವಿಷಯಗಳೆಲ್ಲ ಸಾಮಾನ್ಯವಾಗಿ ವಿದ್ಯಾರ್ಥಿಗಳಿಗ ಬರೆಯಲಿಕ್ಕೆ ಬರಬೇಕು ಅದರಲ್ಲಿ ಕೆಳಗಿನ ವರ್ಗಕ್ಕಿಂತ ಮೇಲಿನ ವರ್ಗದಲ್ಲಿ ವಿಷಯ ವಿವರ ಹಾಗೂ ಸೂಕ್ಷ್ಮವಾಗುತ್ತ ಹೋಗಬೇಕು ಅಂದರೆ ವಿದ್ಯಾರ್ಥಿಗಳ ಯೋಗ್ಯತೆಯು ಬರಹ ವಿಷಯದಲ್ಲಿ ಹೆಚ್ಚುತ್ತ ಹೋಗುವುದು

ಮುಂದೆ ವಿದ್ಯಾರ್ಥಿಗಳು ಹೆಚ್ಚು ಪ್ರೌಢರಾಗುವರು ಅವರು ಹಾಯ ಸ್ಕೂಲಿನ ಹತ್ತು ಹನ್ನೊಂದನೆಯ ತರಗತಿಗಳಲ್ಲಿ ಓದರುತ್ತಿರುವರು ಆ ಮಾನಕ್ಕೆ ಅನುಸರಿಸಿ ಲೇಖನ ವಿಷಯವು ಭಾಷಾಶಿಕ್ಷಣದಲ್ಲಿ ಕಲಿಸಲ್ಪಡ ಬೇಕಾಗುವುದು ಅದಕ್ಕಾಗಿ ಈ ವರ್ಗಗಳ ಅಭ್ಯಾಸಕ್ರಮದಲ್ಲಿ (೧) ಚಿಕ್ಕ ನಿಬಂಧ, ವಾಕ್ಪ್ರಚಾರಗಳ ವಿಸ್ತರಣೆ, ಚರ್ಚಾತ್ಮಕ, ಚರಿತ್ರಾತ್ಮಕ ನಿಬಂಧ ಲೇಖನಗಳು (೨) ಮುಖಂಡರಿಗೆ ಬಹಿರಂಗ ಪತ್ರ ಬರೆಯು ವುದು, ಅಂಥ ಪತ್ರಗಳಿಗೆ ತಾನು ಉತ್ತರಿಸುವುದು. (೩) ಏಕಾಂಕ ನಾಟಕ ಗಳನ್ನು ಬರೆಯುವುದು (೪) ತನ್ನ ವಿಚಾರಗಳ ಪ್ರಚಾರಕ್ಕಾಗಿ ಚಿಕ್ಕ ಕದೆ ಕಟ್ಟುವದು. (೫) ಭಾವನೆಗಳನ್ನೂ ಭಾವನಾತ್ಮಕ ವ್ಯಕ್ತಿಗಳನ್ನೂ ವರ್ಣಿಸುವುದು ಅಂಥ ಪ್ರಸಂಗಗಳನ್ನು ಚಿತ್ರಿಸುವುದು (೬) ಚಲಚಿತ್ರ, ನಾಟಕ, ಕದೆ, ಕಾದಂಬರಿಗಳನ್ನು ವಿಮರ್ಶಿಸುವುದು ಹೆಚ್ಚಿಗ ಸಂಗ್ರಹಣ ಮಾಡುವುದು (೭) ವಿವಿಧ ಗದ್ಯಗಳನ್ನು ಸಂಗ್ರಹಿ ಸುವುದು ಅವುಗಳಿಗೆ ಯೋಗ್ಯ ತಲಬರಹ ಕೊಡುವುದು (೮) ಚಿಕ್ಕ ಚಿಕ್ಕ ಪದ್ಯಗಳನ್ನು ಕಟ್ಟುವುದು ಇವೇ ಮೊದಲಾದ ವಿಷಯಗಳು ಸಮಾ ವೇಶವಾಗುತ್ತವೆ ಇವುಗಳಲ್ಲಿ ವಿವಿಧ ಮಾದರಿಗಳನ್ನು ವಿದ್ಯಾರ್ಥಿಗಳು ರಚಿಸಲಿಕ್ಕೆ ಸಮರ್ಥರಾಗಬೇಕು ಇಲ್ಲಿ ಕೇವಲ ಬರಹಕ್ಕಾಗಿ ಬರಹ ವೆಂದಿರದೆ ಅದರಲ್ಲಿ ವಿದ್ಯಾರ್ಥಿಗಳ ವ್ಯಕ್ತಿತ್ವವು ಒಡಮೂಡಬೇಕು, ರೂಪು ಗೊಳ್ಳಬೇಕು

ಭಾಷಾವಿಷಯದ ಶಿಕ್ಷಕನು ಸಾಮಾನ್ಯವಾಗಿ ಮೇಲೆ ಕಾಣಿಸಿದ–ಬರಹ ವಿಷಯದ ಸ್ಥೂಲ ಅಭ್ಯಾಸಪತ್ರಿಕೆಯಲ್ಲಿ ತೋರಿಸಿದ–ವಿಷಯಗಳನ್ನೆಲ್ಲ ಕ್ರಮ ದಿಂದ ಕಲಿಸಬೇಕಾಗುವುದು ಈ ಕಾರ್ಯವನ್ನು ಉತ್ತಮ ರೀತಿಯಿಂದ ನೆರವೇರಿಸುವ ಶಿಕ್ಷಕರು ಕೆಲವು ಸಂಗತಿಗಳನ್ನು ನೆನಪಿನಲ್ಲಿಡಬೇಕಾಗುತ್ತದು (೧) ಮಕ್ಕಳ ಬರಹಕ್ಕೆ ವಿಷಯವನ್ನು ಆರಿಸುವಾಗ ಆರಂಭದಲ್ಲಿ ಅವರ ಅನುಭವಕ್ಕೆ ಅಳವಡುವ ವಿಷಯಗಳನ್ನೇ ಆರಿಸಿಕೊಳ್ಳಬೇಕು (೨) ಹೊಸ ವಿಷಯಗಳನ್ನು ಕೊಡುವಾಗ ಆ ವಿಷಯಕ್ಕೆ ಸಂಬಂಧಿಸಿದ ಬರಹಗಳನ್ನು ವಾಚನಕ್ಕೆ ಅವರಿಗೆ ಒದಗಿಸಬೇಕು ಇದರಿಂದ ವಾಚನದ ನೆರವನ್ನು ಲೇಖನಕ್ಕೆ ಪಡೆದಂತಾಗುವುದು (೩) ಲೇಖನ ವಿಷಯ ಕಲಿಸುವಾಗ

ಆಯ್ದುಕೊಂಡ ವಿಷಯಗಳನ್ನು ವರ್ಗದಲ್ಲಿ ಚರ್ಚಿಸುವುದು ಅದರಲ್ಲಿ ಪ್ರತಿಪಾದಿಸುವ ವಿಷಯ ಯಾವದು ? ಅದಕ್ಕ ಸಾಧಕ ಬಾದಕ ಸಂಗತಿಗಳು ಯಾವವು ?—ಇವುಗಳನ್ನು ವರ್ಗೀಕರಿಸುವುದು (೪) ಬರಹಕ್ಕೆ ಮಕ್ಕಳ ಸ್ಫೂರ್ತಿಯೊಂದು ಸಾಧನವಾದರೂ ಲೇಖನವು ಸುಸಂಬದ್ಧವೂ ಆಯ್ಕೆ ಹೊಂದಿದ ಶಬ್ದ ಪ್ರಯೋಗವುಳ್ಳುದೂ ಆಗುವಂತೆ ಗಮನ ಕೊಡುವುದು (೫) ಗದ್ಯ ರಚನೆಯಂತೆಯೇ ಪದ್ಯ ರಚನೆಯ ಕಡೆಗೂ ಅನೇಕ ವಿದ್ಯಾರ್ಥಿಗಳ ಒಲವು ಇರುತ್ತದೆ ಅದನ್ನೂ ಪ್ರೋತ್ಸಾಹಿಸುವುದು

ಇನ್ನು ಶಿಕ್ಷಕರು ವಿದ್ಯಾರ್ಥಿಗಳ ಬರಹಗಳನ್ನೆಲ್ಲ ನೋಡಿ ಅವರ ತಪ್ಪು-ಒಪ್ಪುಗಳನ್ನು ಅವರಿಗೆ ತೋರಿಸಿ ಕೊಡುವುದು. ಅವುಗಳನ್ನು ಮಕ್ಕಳು ತಿದ್ದಿಕೊಂಡು, ಬರಹದಲ್ಲಿ ಪ್ರಗತಿಯನ್ನು ಸಾಧಿಸುವಂತೆ ಪ್ರೋತ್ಸಾಹಿಸ ತಕ್ಕದ್ದು. ಈ ಕಾರ್ಯವು ಬಹು ಮಹತ್ವದ್ದಾಗಿದೆ ಬೇಸರವನ್ನರಿಯದ ಶಿಕ್ಷಕರ ಕಾರ್ಯವಾಗಿದೆ ಬರಹಗಳಲ್ಲಿ ದೀರ್ಘ-ಹ್ರಸ್ವಗಳನ್ನು ಮೊದಲು ಮಾಡಿಕೊಂಡು, ಪರಿಚ್ಛೇದ ರಚನೆಯ ವರೆಗೆ ಹಲವು ವಿಧದ ತಪ್ಪುಗಳು ವಿದ್ಯಾರ್ಥಿಗಳಿಂದ ಆಗುತ್ತವೆ ಅವುಗಳನ್ನೆಲ್ಲ ಶಿಕ್ಷಕರು ತಿದ್ದಿಕೊಟ್ಟು, ತಾಳ್ಮೆಯಿಂದ ಅವರಿಗೆ ಮಾರ್ಗದರ್ಶನ ಮಾಡುವ ಹೊಣೆಗಾರಿಕೆಯು ಶಿಕ್ಷಕನದಾಗಿರುತ್ತದೆ ಮಕ್ಕಳ ಲೇಖನ ನಿರ್ಮಿತಿಯ ಒಲವನ್ನು ಆತ್ಮಾವಿಷ್ಕಾರದ ಎಳೆಯ ಸಸಿಯನ್ನು ಬಹು ಜಾಗ್ರತೆಯಿಂದ ಸಂರಕ್ಷಿಸಿ ಪೋಷಿಸುವ ಕಾರ್ಯವು ಉತ್ತಮ ತರಗತಿಯ ಭಾಷಾಶಿಕ್ಷಕನಿಂದಲೇ ಸಾಧ್ಯವಾಗುವುದು ಅವನೊಬ್ಬ ಒಳ್ಳೆಯ ತೋಟಗಾರನಿದ್ದಂತೆ ಇರುವನು ಇಂಥ ತೋಟಿಗನಿಂದಲೇ ನಮ್ಮ ರಾಷ್ಟ್ರವು ಸುಂದರ ನಂದನವನವಾಗಬೇಕು ಅಲ್ಲಿ ಮಕ್ಕಳೆಂದರೆ ವಿವಿಧ ಮೊಗ್ಗೆಗಳು ಅವು ಯೋಗ್ಯ ಕಾಲದಲ್ಲಿ ಯೋಗ್ಯ ರೀತಿಯಿಂದ ಅರಳಿ, ಸುಗಂಧವನ್ನು ಬೀರುವಂತೆ ಶಿಕ್ಷಕರು ಯತ್ನಿಸುವುದು ಅದರಲ್ಲಿಯೇ ಅವರ ಜೀವನದ ಸಾರ್ಥಕತೆಯಿದೆ, ಮುಕ್ತಿಯಿದೆ



## ೧೦. ಭಾಷಾ ಶಿಕ್ಷಣದ ಸಫಲತೆ

ಭಾಷಾ ಶಿಕ್ಷಣವು ಒಂದು ಮಹತ್ವದ ಕಾರ್ಯವಾಗಿದೆ ಅದರಂತೆ ಅದರ ವ್ಯಾಪ್ತಿಯೂ ಬಹು ವಿಶಾಲವಾದ ಕ್ಷೇತ್ರವನ್ನು ಆವರಿಸಿದೆ ವಿವಿಧ ಸಾಧನಗಳಿಂದ, ಮಕ್ಕಳಲ್ಲಿ ಸಹಜವಾಗಿರುವ ಮಾತುಗಾರಿಕೆಯನ್ನು ಪ್ರೋತ್ಸಾಹಿಸುತ್ತ ಶಿಕ್ಷಕನು ಮುಂದರಿಯಲಿಕ್ಕೆ ಬೇಕಾಗುತ್ತದೆ ಅದನ್ನು ಮಕ್ಕಳ ಶ್ರವಣ ಶಕ್ತಿಯಿಂದ ವಿಕಾಸಗೊಳಿಸಿ, ಅಕ್ಷರ ಪರಿಚಯದಿಂದ ಓದು-ಬರಹಗಳಲ್ಲಿ ಪ್ರಗತಿಯನ್ನು ಸಾಧಿಸಬೇಕು ಕೇಳುವಿಕೆ, ಓದುವಿಕೆಗಳಿಂದಲೂ ನೋಡುವಿಕೆ, ನಿರೀಕ್ಷಣೆಗಳಿಂದಲೂ ಮಕ್ಕಳ ವ್ಯಕ್ತಿತ್ವವು ದಿನದಿನಕ್ಕೆ ವಿಕಾಸ ಹೊಂದುತ್ತ ಹೋಗುವದು ಸುತ್ತಲಿನ ಪರಿಸರಕ್ಕೆ ಪ್ರತಿಕ್ರಿಯೆಯಿಂದಲೂ ತಾದಾತ್ಮ್ಯ ಹೊಂದುವುದರಿಂದಲೂ ಪ್ರಕೃತಿಯಲ್ಲಿ ತನ್ನದೊಂದು ವ್ಯಕ್ತಿತ್ವವನ್ನು ಮನುಷ್ಯನು ಸ್ಥಾಪಿಸುತ್ತಿರುತ್ತಾನೆ ಇಂಥ ವ್ಯಕ್ತಿತ್ವವನ್ನು ತನ್ನ ಮಾತು, ಹಾಗೂ ಬರಹಗಳಲ್ಲಿ ಒಡಮೂಡಿಸಲಿಕ್ಕೆ ವಿದ್ಯಾರ್ಥಿಯು ಸಮರ್ಥನಾದರೆ ಭಾಷಾಶಿಕ್ಷಣವು ಸಾರ್ಥಕವಾಗುವುದು ಸಾರ್ಥಕತೆಯು ಆತ್ಮಾವಿಷ್ಕಾರದಲ್ಲಿ ಕಂಡುಬರುವುದು ಇದು ಜೀವನದ ಲಕ್ಷಣವಾಗಿದೆ

ಭಾಷೆಯೊಂದು ಪ್ರವಾಹವಿದ್ದಂತೆ ಅದು ಸತತ ಮುಂದ ಮುಂದೆ ಹರಿಯುತ್ತಿರುತ್ತದೆ ಅನೇಕ ಕವಲುಗಳನ್ನು ಸೇರಿಸಿಕೊಂಡು ಪುಷ್ಟವೂ ಆಗುತ್ತದೆ ಒಮ್ಮೊಮ್ಮೆ ತನ್ನ ಸ್ಥಿತಿ, ಗತಿಗಳನ್ನು ವ್ಯತ್ಯಾಸಮಾಡಿಕೊಂಡು ಮುಂದೆ ಸಾಗುತ್ತದೆ ಅದರ ವಿಕಾಸವು ಸ್ವೈರವಾಗಿ, ತನ್ನ ತನವನ್ನು ಕಳೆದುಕೊಳ್ಳದಂತೆ ಆಗಾಗ ವ್ಯಾಕರಣದ ಕಟ್ಟು ನಿಟ್ಟುಗಳನ್ನು ಭಾಷಾಶಾಸ್ತ್ರವಿದರು ಹಾಕುತ್ತ ಬಂದಿರುತ್ತಾರೆ ಇವೆಲ್ಲವುಗಳ ಅಭ್ಯಾಸವು ಭಾಷಾ-ಶಿಕ್ಷಕನಿಗೆ ಅತ್ಯವಶ್ಯವಾಗಿದೆ. ಅವನು ಮಕ್ಕಳಿಗೆ ಈಗ ಜೀವಂತವಾಗಿರುವ ಜನರು ಮಾತನಾಡುವ—ಭಾಷೆಯನ್ನಷ್ಟೇ ಬೋಧಿಸುವದಿರುವದಿಲ್ಲ ಹಿಂದಿನ ನುಡಿಯ ಸ್ವರೂಪದ ಕಲ್ಪನೆಯನ್ನೂ ಅಭ್ಯಾಸವನ್ನೂ ಮಕ್ಕಳಿಗೆ ಒದಗಿಸುವದಿರುತ್ತದೆ ಮಾತೃಭಾಷೆಯಲ್ಲಿರುವ ಪ್ರಾಚೀನ ಸಾಹಿತ್ಯದ ಅಭ್ಯಾಸಕ್ಕೂ ಸ್ಥೂಲಪರಿಚಯವನ್ನು ಹೊಂದಲಿಕ್ಕೂ ಸಹ ಒಂದು ತರದ ವಿಶಿಷ್ಟ ಅಭ್ಯಾಸದ ಆವಶ್ಯಕತೆಯು ಮಕ್ಕಳಿಗೆ ಇರುತ್ತದೆ ಇದನ್ನು ಶಿಕ್ಷಕರು ಭಾಷಾ ಬೋಧನೆಯಲ್ಲಿ ಒದಗಿಸಬೇಕಾಗುತ್ತದೆ ಅಂದರೆ ಭಾಷಾಶಿಕ್ಷಣವು ಪೂರ್ಣವಾಗುವುದು.

ಇನ್ನು ಬಾಷೆಗೆ ಗದ್ಯ-ಪದ್ಯಗಳೆಂದು ಎರಡು ಮುಖಗಳು ಒಂದು ಕಾಲದಲ್ಲಿ ಪದ್ಯಕ್ಕೇನೇ ಪ್ರಾಧಾನ್ಯವಿದ್ದರೆ ಇನ್ನೊಂದು ಕಾಲದಲ್ಲಿ ಗದ್ಯವು ವಾಙ್ಮಯದಲ್ಲಿ ಮುಖ್ಯ ಸ್ಥಾನವನ್ನು ಪಡೆಯುವುದು ಯಾವ ರೂಪದಲ್ಲಿದ್ದರೂ ಅದರಲ್ಲಿರುವ ಬಾವ, ಧ್ವನಿ ಮತ್ತು ರಸಗಳಿಗೇನೇ ಪ್ರಾಧಾನ್ಯವಿರುತ್ತದೆ ಭಾಷೆಯೊಂದು ಇವುಗಳ ವಾಹಕ, ಒಂದು ಮಾಧ್ಯಮ ಈ ಮಾಧ್ಯಮ ಗದ್ಯದಲ್ಲಿದ್ದರೇನು ? ಪದ್ಯದಲ್ಲಿದ್ದರೇನು ? ಅದರಲ್ಲಿ ವ್ಯಕ್ತವಾಗುವ ಅರ್ಥವನ್ನು ಗ್ರಹಿಸಲಿಕ್ಕೂ ತಮ್ಮ ವ್ಯಕ್ತಿತ್ವವನ್ನು ತಕ್ಕ ಬಾಷೆಯಲ್ಲಿ ಒಡಮೂಡಿಸಲಿಕ್ಕೂ ಮಕ್ಕಳು ಸಮರ್ಥರಾಗಬೇಕು ಇದಕ್ಕಾಗಿ ಆರಂಭದಲ್ಲಿ ಗದ್ಯ ಪದ್ಯಗಳ ಕ್ರಮಬದ್ಧವಾದ ಅಭ್ಯಾಸವು ಸಾಗುವುದವಶ್ಯವಿದೆ ಅದು ವಿದ್ಯಾರ್ಥಿಗಳ ವಯಸ್ಸು, ಮನೋಧರ್ಮಗಳಿಗೆ ಅನುಸರಿಸಿದ ಅಭ್ಯಾಸಕ್ರಮದಿಂದ ರೂಪುಗೊಳ್ಳಬೇಕು ಶಿಕ್ಷಣಖಾತೆಯವರು ಸಿದ್ಧಗೊಳಿಸಿದ ಅಬ್ಯಾಸಕ್ರಮವನ್ನು ಒಂದು ಕೈಗೋಲೆಂದು ಸ್ವೀಕರಿಸಿ, ಶಿಕ್ಷಕರು ತಾವು ಕಲಿಸುವ ವಿದ್ಯಾರ್ಥಿಗಳಿಗೆ ತಕ್ಕ ಭಾಷಾಭ್ಯಾಸಕ್ರಮವನ್ನು ಯೋಜಿಸಿಕೊಳ್ಳಬೇಕಾಗುತ್ತದೆ

ಈ ಯೋಜನೆಯು ಶಿಕ್ಷಕನ ವ್ಯಕ್ತಿತ್ವವನ್ನು ಅವಲಂಬಿಸಿದೆ ವ್ಯಕ್ತಿತ್ವವೇ ಅವನಿಗೊಂದು ಗೌರವವನ್ನು ತಂದುಕೊಡುವಂಥ ಶಕ್ತಿಯಾಗಿದೆ ಇದು ಅವನ ವಿಶಾಲದೃಷ್ಟಿ, ಪರಿಶುದ್ಧಾಂತಃಕರಣ, ಮಕ್ಕಳಲ್ಲಿ ಪ್ರೇಮ ನ್ಯಾಯಪರತೆ, ಮಾತೃಭಾಷೆಯ ಸದಭಿಮಾನಗಳಿಂದ ಪುಷ್ಟವಾಗಿರಬೇಕು ನಿರಲಸಪ್ರವೃತ್ತಿ, ವೃತ್ತಿಗೌರವ, ಶುದ್ಧ ನಡೆ-ನುಡಿಗಳಲ್ಲಿ ಅವನ ವ್ಯಕ್ತಿತ್ವ ವಿದ್ಯಾರ್ಥಿಗಳ ಮುಂದೆ ವ್ಯಕ್ತವಾಗುತ್ತ ಇರಬೇಕು. ಅಂದರೆ ಅವನು ಯೋಜಿಸಿಕೊಂಡ ಭಾಷಾಶಿಕ್ಷಣವು ಯಶಸ್ವಿಯಾಗುವುದು ವಿದ್ಯಾರ್ಥಿಗಳ ವ್ಯಕ್ತಿತ್ವ ನಿರ್ಮಾಣವಾಗುವುದು ಅದು ಅವರ ಜೀವನವನ್ನು ರೂಪಿಸುವುದು, ಉದಾತ್ತಗೊಳಿಸುವುದು ಅಂಥ ಪ್ರಜೆಗಳಿಂದ ನಾಡಿಗೆ ಹಿತ ಬೋಧಿಸಿದ ಶಿಕ್ಷಕನಿಗೆ ಗೌರವ ಗುರು ಶಿಷ್ಯರಿಬ್ಬರ ಜೀವನವೂ ಸಾರ್ಥಕ. ಭಾಷಾಶಿಕ್ಷಣಕ್ಕೂ ಸಫಲತೆ.

# ಚಟುವಟಿಕೆಯ ಹಿನ್ನೆಲೆಯ ಪಾಠಗಳು

## ೧ ನೆಯ ಪಾಠ

**ಚಟುವಟಿಕೆ .** ಕಸ ಆರಿಸುವದು ವರ್ಗ ೧ನೆಯ ಇಯತ್ತೆ.

ಸ್ಥಳ ಹಾಗೂ ಸನ್ನಿವೇಶ ಶಾಲೆಯ ಮುಂದಿನ ಹೂದೋಟ

ಮುಂಜಾನೆ ಶಾಲೆಯು ಆರಂಭವಾದೊಡನೆ.

ಸಮಯಾನ್ನಿಕ ವಿಷಯ ಮಾತನಾಡುವಿಕೆ

| ಶಿಕ್ಷಕನ ಪ್ರಶ್ನೆಗಳು | ವಿದ್ಯಾರ್ಥಿಗಳ ಉತ್ತರಗಳು |
|---|---|
| ೧) ಈಗ ಏನು ಮಾಡಿದೆವು ? | ಕಸ ಆರಿಸಿದೆವು. |
| ೨) ಕಸ ಎಲ್ಲಿತ್ತು ? | ಹೂದೋಟದೊಳಗೆ ಇತ್ತು |
| ೩) ಹೂದೋಟ ಎಲ್ಲಿದೆ ? | ಶಾಲೆಯ ಮುಂದೆ ಇದೆ |
| ೪) ಯಾರ ತೋಟ ಇದು ? | ನನ್ನ ತೋಟ |
| ೫) ಇದರಲ್ಲಿ ಏನೇನಿವೆ ? | ಗಿಡ, ಬಳ್ಳಿಗಳು ಇವೆ |
| ೬) ಗಿಡಗಳನ್ನು ತೋರಿಸಿರಿ ? | (ತೋರಿಸುವರು ) |
| ೭) ಬಳ್ಳಿಗಳನ್ನು ತೋರಿಸಿರಿ ? | ( ತೋರಿಸುವರು ) |
| ೮) ಈ ಗಿಡ ಏತರದು ? | ಗುಲಾಬಿ ಹೂವಿನ ಗಿಡವಿದೆ |
| ೯) ಈ ಬಳ್ಳಿ ಯಾವ ಹೂವಿನದು? | ಮಲ್ಲಿಗೆಯ ಹೂವಿನ ಬಳ್ಳಿ ಇರುವದು |
| ೧೦) ಕಸ ಆರಿಸುವದರಿಂದ ಏನಾಗುವದು ? | ತೋಟ ಥಳಥಳ ಆಗುವದು |
| ೧೧) ಈ ಗಿಡ ಬಳ್ಳಿಗಳು ನಮಗೆ ಏನು ಕೊಡುವವು ? | ಹೂವುಗಳನ್ನು ಕೊಡುವವು. |
| ೧೨) ಅವುಗಳಿಗಾಗಿ ನಾವು ಏನು ಮಾಡಬೇಕು ? | ನೀರು ಹಾಕುವದು, ಕಸ ತೆಗೆಯುವದು |

ಶಿಕ್ಷಕರು ಮೊದಲು ಒಬ್ಬೊಬ್ಬ ವಿದ್ಯಾರ್ಥಿಯಿಂದ ಉತ್ತರವನ್ನು ಸಂಪಾದಿಸುತ್ತ ಹೋಗಬೇಕು ಮಕ್ಕಳು ಕೊಟ್ಟ ಅಪೂರ್ಣ ಉತ್ತರಗಳನ್ನು

ಶಿಕ್ಷಕರು ಪೂರ್ಣಗೊಳಿಸಿ, ವಾಕ್ಯರೂಪಕ್ಕೆ ತರಬೇಕು ಪ್ರತಿಯೊಂದು ಉತ್ತರವನ್ನು ಎಲ್ಲ ವಿದ್ಯಾರ್ಥಿಗಳಿಂದಲೂ ಸಾಮೂಹಿಕವಾಗಿ ಅನ್ನಿಸುವುದು ವರ್ಗದೊಳಗಿನ ಜಾಣ ವಿದ್ಯಾರ್ಥಿಯಿಂದ ಸಂಗ್ರಹವಾಗಿ ಹೇಳಿಸುವುದು

## ೨ನೆಯ ವಾರ

**ಚಟುವಟಿಕೆ** ವೈಯಕ್ತಿಕ ಸ್ವಚ್ಛತೆ ಹಾಗೂ ಶಿಸ್ತು

**ವರ್ಗ** ೧ನೆಯ ಇಯತ್ತೆ

**ಸಾಧನಗಳು** ನೀರು, ಕರಿಬೂದಿ, ತಂಬಿಗೆ ಇತ್ಯಾದಿ

**ಸ್ಥಳ ಮತ್ತು ಸನ್ನಿವೇಶ** ಶಾಲೆಯ ಮುಂದಿನ ಅಂಗಳ ಮಂಜಾನೆ ಶಾಲೆಯು ಆರಂಭವಾದ ಮೇಲೆ ವರ್ಗದ ಎಲ್ಲ ವಿದ್ಯಾರ್ಥಿಗಳನ್ನು ಬಯಲಿನಲ್ಲಿ ಕರೆದೊಯ್ದು ಚಟುವಟಿಕೆಯನ್ನು ಆರಂಭಿಸುವದು

**ಸಮಯಾನ್ವಿತ ವಿಷಯ** ಮಕ್ಕಳ ಬೆಳಗಿನ ಕಾರ್ಯಕ್ರಮವನ್ನು ಕೇಳಿಕೊಳ್ಳುವುದು.

**ಉದ್ದೇಶ** ವಿದ್ಯಾರ್ಥಿಗಳ ನಿವೇದನ ಶಕ್ತಿಯನ್ನು ಬೆಳೆಯಿಸಿ, ವಾಚನದ ಪೂರ್ವ ಸಿದ್ಧತೆಯನ್ನು ಮಾಡಿಕೊಳ್ಳುವದು

**ಕೆಲವು ಚಟುವಟಿಕೆಯ ಚಿತ್ರಗಳು** (೧) ಒಬ್ಬ ವಿದ್ಯಾರ್ಥಿಯು ಹಲ್ಲು ತಿಕ್ಕುತ್ತಿರುವನು (೨) ಇನ್ನೊಬ್ಬನು ನೀರಿನಿಂದ ಮುಖ, ಬಾಯಿ ತೊಳೆದುಕೊಳ್ಳುವನು (೩) ತಂಬಿಗೆಯಲ್ಲಿ ನೀರು ತರುವವನು ಮತ್ತೊಬ್ಬ (೪) ಅಂಗಿಯ ಗುಂಡಿಗಳನ್ನು ಹಾಕಿಕೊಳ್ಳುವ ವಿದ್ಯಾರ್ಥಿ (೫) ಟೊಪ್ಪಿಗೆ ಸರಿಪಡಿಸಿಕೊಳ್ಳುವವನು ಮಗುದೊಬ್ಬ—ಇಂಥ ಹಲವು ಘಟನೆಗಳು ಶಿಕ್ಷಕರ ಮಾರ್ಗದರ್ಶನದಲ್ಲಿ ನಡೆಯುವವು

| ಶಿಕ್ಷಕನ ಪ್ರಶ್ನೆಗಳು | ವಿದ್ಯಾರ್ಥಿಗಳ ಉತ್ತರಗಳು |
|---|---|
| ೧) ಬಸವ ಏನು ಮಾಡುವನು ? | ಬಸವ ಹಲ್ಲು ತಿಕ್ಕುವನು |
| ೨) ಭೀಮ ಏನು ಮಾಡುವನು ? | ನೀರು ತರುವನು |
| ೩) ಮುಖ ತೊಳೆದುಕೊಳ್ಳುವವನು ಯಾರು? | ರಾಮನು ಮುಖ ತೊಳೆದುಕೊಳ್ಳುವನು |

ಹೀಗೆ ಅಲ್ಲಿ ನಡೆದಿರುವ ವಿವಿಧ ಘಟನಗಳ ಬಗ್ಗೆ ಒಬ್ಬೊಬ್ಬರಿಗೆ ಒಂದೊಂದು ಪ್ರಶ್ನೆಗಳನ್ನು ಕೇಳಿ,ಉತ್ತರಗಳನ್ನು ಸಂಪಾದಿಸುವದು ಅವರು ಉತ್ತರಗಳನ್ನು ಸರಿಯಾಗಿ ಕೊಟ್ಟ ತರುವಾಯ ಸುಸಂಸ್ಕೃತ ಮನತನದ ಜಾಣ ವಿದ್ಯಾರ್ಥಿಯನ್ನು ಉದ್ದೇಶಿಸಿ, ಗುರುಗಳು ಪ್ರಶ್ನಗಳನ್ನು ಕೇಳ-ಬಹುದು

೧) ನೀನು ಮುಂಜಾನೆ ಎಷ್ಟು ಗಂಟೆಗೆ ಏಳುವಿ ? ಆರು ಗಂಟೆಗ ಏಳುವೆ

೨) ಎದ್ದ ಕೂಡಲೆ ಏನು ಮಾಡುವೆ? ಮುಖ ತೊಳೆದುಕೊಳ್ಳುವೆ.

೩) ಆಮೇಲೆ ಏನು ಮಾಡುವೆ ? ದೇವರಿಗೆ ನಮಸ್ಕಾರ ಮಾಡುವೆ

ಈ ರೀತಿ ವಿವರಗಳನ್ನು ಕೇಳಿಕೊಳ್ಳುತ್ತ, ವಿಷಯವನ್ನು ವಿಸ್ತರಿಸುವುದು ಶೌಚ, ಸ್ನಾನ, ಉಡಿಗೆ-ತೊಡಿಗೆಗಳ ವಿವರಗಳ ಬಗ್ಗೆ ವರ್ಗದ ಎಲ್ಲ ವಿದ್ಯಾರ್ಥಿಗಳೊಡನೆ ಮಾತುಕತೆಗಳನ್ನು ಬೆಳೆಯಿಸುವುದು ಅದರಲ್ಲಿ ಮಕ್ಕಳಿಗೆ ಪಾಠವನ್ನು ಕಲಿಯುತ್ತಿರುವೆವೆಂಬ ಅರಿವು ಉಂಟಾಗದಂತೆಯೇ ಕೃತ್ರಿಮತೆಗೆ ಎಡೆಗೊಡದಂತೆ—ಶಿಕ್ಷಕರು ತಮ್ಮ ಉದ್ದೇಶವನ್ನು ಸಾಧಿಸಿ ಕೊಳ್ಳುವದು

ಹೀಗೆ ಕೆಲವು ದಿನಗಳ ವರೆಗೆ ಮಕ್ಕಳೊಡನೆ ಮಾತನಾಡುತ್ತ ಕಳೆ-ಯುವುದು ಅವರನ್ನು ಊರೊಳಗಿನ ಗುಡಿ, ಗೋಪುರ, ಹುಡೆ, ಕೆರೆ, ಕಾಲುವೆ ಮೊದಲಾದವುಗಳನ್ನು ತೋರಿಸಲಿಕ್ಕೆ ಒಯ್ದು, ಶಿಕ್ಷಕರು ಅಲ್ಲಲ್ಲಿ ಭಾಷಾ ಶಿಕ್ಷಣದ ಪಾಠಗಳನ್ನು ಸಾಗಿಸಬೇಕು ವಾಚನದ ಪೂರ್ವ ಸಿದ್ಧತ ಯನ್ನು ಮಾಡಿಕೊಳ್ಳಬೇಕು

# ೩ ನೆಯ ಪಾಠ

**ಚಟುವಟಿಕೆ :** ಹತ್ತಿಯ ಕಸರು ತೆಗೆದು, ಅರೆಯುವದು ಈ ಮೊದಲು ಮೇಲಿನ ವರ್ಗಗಳಲ್ಲಿ ನೂಲುವ, ನೇಯುವ ವಟಿಕೆಗಳನ್ನು ವಿದ್ಯಾರ್ಥಿಗಳಿಗೆ ತೋರಿಸಿರಬೇಕು

**ವರ್ಗ :** ೨ ನೆಯ ಇಯತ್ತೆ

**ಸಮಯಾನ್ವಿತ ವಿಷಯ :** ಗದ್ಯ (ಗಾಂಧಿ ಟೊಪ್ಪಿಗೆ)

**ಉಪಕರಣ** ಹತ್ತಿಯ ಕಸರು ತೆಗೆಯುವುದರಿಂದ ಅರಿವೆ ಸಿದ್ಧವಾಗಿ, ಟೊಪ್ಪಿಗೆಯನ್ನು ತಯಾರಿಸುವ ವರೆಗಿನ ಸ್ಥಿತಿಗಳನ್ನು ಚಿತ್ರಿಸುವ ಚಿತ್ರಪಟ

**ಉದ್ದೇಶ** ಅರ್ಥ ತಿಳಿದುಕೊಂಡು, ಗದ್ಯವನ್ನು ಚೆನ್ನಾಗಿ ಓದಲಿಕ್ಕೆ ಬರಬೇಕು

| ಲುಗಳು | ಆವಶ್ಯಕ ಜ್ಞಾನ | ಕಲಿಸುವ ಕ್ರಮ | ಕ ಹ ಬರೆಹ |
|---|---|---|---|
| ಸ್ತಾವನೆ | | ನೀವು ಈಗ ಸಿದ್ಧಗೊಳಿಸಿದ ಅರಿವೆಯನ್ನು ಎರಡನೆಯ ವರ್ಗದ ಮಿತ್ರರಿಗೆ ಕೊಡೋಣ<br><br>೧) ಅದರಿಂದ ಅವರು ಏನು ಮಾಡುವರು ?<br>೨) ನೂಲಿನಿಂದ ಏನು ಸಿದ್ಧವಾಗುವದು ?<br>( ಚಿತ್ರ ತೋರಿಸಿ ) | |

| | | | |
|---|---|---|---|
| | | ೩) ಈ ಚಿತ್ರದಲ್ಲಿ ಏನೇನು ಕಾಣುವಿರಿ ?<br>೪) ಗಾಂಧಿಟೊಪ್ಪಿಗೆ ಹೇಗೆ ಸಿದ್ಧವಾಗುವುದು ನಿಮಗೆ ಗೊತ್ತಿದೆಯೆ ? | |
| ೨ ಉದ್ದೇಶ ಕಥನ | ಹಾಗಾದರೆ ' ಗಾಂಧಿ ಟೊಪ್ಪಿ'ಗೆಯ † ಕಥೆಯನ್ನು ಇಂದು ಕೇಳೋಣ. | | ಗಾಂಧಿ ಟೊಪ್ಪಿಗೆ |
| ೩ ವಿಷಯ / ವಿವೇಚನ | | | |
| ಅ) ಶಿಕ್ಷಕರ ಮಾದರಿಯ ವಾಚನ | ಮಕ್ಕಳೇ, ನನ್ನನ್ನು ಗಾಂಧಿ ಟೊಪ್ಪಿಗೆಯೆಂದು ಕರೆಯತೊಡಗಿದರು | ಶಿಕ್ಷಕರು ಮೊದಲು ಒಂದು ಸಲ ಚೆನ್ನಾಗಿ ಓದಿ ತೋರಿಸುವರು | |
| ಬ) ಶಿಕ್ಷಕರು ವಿವೇಚನ ಯೊಡನೆ ಓದುವಿಕೆ | ,, ,, | ಈಗ ವಿದ್ಯಾರ್ಥಿಗಳಿಗೆ ವಾರವನ್ನು ನೋಡಲಿಕ್ಕೆ ಶಿಕ್ಷಕರು ಹೇಳುತ್ತಾರೆ ಹಾಗೂ ಕಠಿಣ ಪದಗಳ ಅರ್ಥವನ್ನು ವಿವರಿಸುತ್ತ ನಾಗುವರು ಅದರಲ್ಲಿ ಪ್ರಶ್ನೋತ್ತರ ಕ್ರಮವನ್ನು ಅವಲಂಬಿಸಬೇಕು. | ಜತನ, ಜೋಕೆ, ಸ್ವಲ್ಪ, ತುಸು ಮೃದು, ಮೆತ್ತಗೆ ನಮಿಸು, ನಮಸ್ಕಾರ ಮಾಡು. |
| ೪) ಪುನರವಲೋಕನ | ಗಾಂಧಿ ಟೊಪ್ಪಿಗೆಯ ಕಥೆ ಹೇಳಿದೆ<br>ಟೊಪ್ಪಿಗೆಯು ತಾನೇ ಕಥೆ ಹೇಳಿತು. | ೧) ಈ ವಾರದಲ್ಲಿ ಯಾರ ಕದೆ ಹೇಳಿದೆ ?<br>೨) ಕಥೆ ಯಾರು ಹೇಳಿದರು ?<br>೩) ಯಾರ ಹಬ್ಬ ಬಂದಿತು ? | |

| | | |
|---|---|---|
| | ಗಾಂಧಿ ಅಜ್ಜನ ಹಬ್ಬ ಬಂದಿತು ಹತ್ತಿಯನ್ನು ಅರಿದರು ಹಿಂಜದರು ಹಂಜಿ ಮಾಡಿದರು ನೂತರು ಗಾಂಧಿ ಅಜ್ಜನ ಕೊರಳಲ್ಲಿ ಹಾಕಿದರು | ೪) ಆ ಹಬ್ಬದಲ್ಲಿ ವಿದ್ಯಾರ್ಥಿಗಳು ಏನೇನು ಮಾಡಿದರು ? (ಇತ್ಯಾದಿ) |
| ೫) ಉಪ-ಸಂಹಾರ • | ನಿಮ್ಮ ಮನೆಯಲ್ಲಿ ನಿಮ್ಮ ತಾಯಿಗ ಗಾಂಧಿ ಟೊಪ್ಪಿಗೆಯ ಕಥೆ ಹೇಳಿರಿ | |

† ಎರಡನೇ ಪುಸ್ತಕದೊಳಗಿನ ಹನ್ನೆರಡನೆಯ ವಾರ

## ೪ ನೆಯ ವಾರ

**ಚಟುವಟಿಕೆ** ಮಕ್ಕಳಿಗೆ ಸಂತೆಯನ್ನು ತೋರಿಸಿ ತರುವದು

**ವರ್ಗ** ಮೂರನೆಯ ಇಯತ್ತೆ

**ವಿಷಯ** ಭಾಷಾ (ವ್ಯಾಕರಣ)

**ಸಮಯೋನ್ವಿತ ವಿಷಯ** ವಾಕ್ಯರಚನೆ

| ೧) ಮಟ್ಟಲುಗಳು | ಆವಶ್ಯಕ ಜ್ಞಾನ. | ಕಲಿಸುವ ಕ್ರಮ | ಕ ಹ ಬರೆಹ |
|---|---|---|---|
| ೧) ಪ್ರಸ್ತಾವನೆ | | ೧) ನಿಮ್ಮೂರ ಸಂತೆಯು ಯಾವ ವಾರ ಆಗುತ್ತದೆ ? | |

| | | | |
|---|---|---|---|
| | | ೨) ಸಂತೆಯ ದಿನ ನಿಮಗೆ ಬಿಡುವು ಏಕೆ ಇರುತ್ತದ ?<br>೩) ಸಂತೆ ಎಂದರೆ ಏನು ?<br>೪) ಅದು ಎಲ್ಲಿ ಕೂಡುತ್ತದೆ ? | |
| ಉದ್ದೇಶ ಕಥನ | ಈಗ ಸಂತೆಯ ಬಗ್ಗೆ ಹೆಚ್ಚಿನ ಸಂಗತಿಯನ್ನು ತಿಳಿದುಕೊಳ್ಳೋಣ | | ಸಂತೆ |
| ವಿಷಯ ವಿವೇಚನೆ. | | ೧) ಸಂತೆಯಲ್ಲಿ ನೀವು ಏನೇನು ನೋಡಿದಿರಿ ? | |
| | ಕಾಯಿಪಲ್ಲೆ | ಒಬ್ಬೊಬ್ಬರಿಂದ ಒಂದೊಂದು ಒಡವೆಗಳ ಹೆಸರನ್ನು ಕೇಳಿಕೊಳ್ಳುವದು | |
| | ಜೋಳ<br>ಗಡಿಗೆ<br>ಅಕ್ಕಿ<br>ಗೋದಿ | ಯಾರು ಮಾಡುವರು ? | ಕುಂಬಾರ |
| | ಆಟಿಗೆ<br>ಅಂಗಡಿಗಳು<br>ದನಗಳು | ಆಟಿಗೆ, ಕನ್ನಡಿ ಮೊದಲಾದವ್ರಗಳನ್ನು ಮಾರುವವರು ಯಾರು ? | ಮಣಿಗಾರ |
| | ಸೀರೆ | ಸೀರೆಯನ್ನು ಯಾರು ನೇಯುವರು ? | ಜಾಡರು, ನೆಯ್ಕಾರರು |
| | ಕಂಬಳಿ | ಕಂಬಳಿಯನ್ನು ಸಿದ್ಧಗೊಳಿಸುವವರು ಯಾರು ? ಯಾಕೆ ? | ಕುರುಬರು |

| | | |
|---|---|---|
| | | ಮಕ್ಕಳಿಂದ ಸುಂದರ ವಾಕ್ಯಗಳನ್ನು ಮಾಡಲಿಕ್ಕೆ ಹಚ್ಚುವದು. ಬಾಯಿಂದ ಕೇಳಿಕೊಳ್ಳುವದು.<br>ಮಕ್ಕಳಿಗೆ ತಮ್ಮ ತಮ್ಮ ಪಾಟಿಯ ಮೇಲೆ ಐದೈದು ವಾಕ್ಯಗಳನ್ನು ಬರಯಲಿಕ್ಕೆ ಹೇಳುವದು |
| ೪) ಪುನರವ-ಲೋಕನ. | | ಒಳ್ಳೆಯ ವಾಕ್ಯಗಳನ್ನು ಬರೆದ ವಿದ್ಯಾರ್ಥಿಗಳ ಪಾಟಿಯನ್ನು ತಕ್ಕೊಂಡು ವರ್ಗದಲ್ಲಿ ಓದಿ ಹೇಳುವದು ಮಾದರಿಗೆಂದು ಕ ಹ ಮೇಲೆ ಕೆಲವು ವಾಕ್ಯ ಬರೆಯುವುದು |
| ೫) ಗೃಹಪಾಠ. | | ನೀವು ಸಂತೆಯಲ್ಲಿ ನೋಡಿದ ಸಾಮಾನುಗಳ ಹೆಸರನ್ನು ಬರೆದು ತನ್ನಿರಿ. |

# ೫ ನೆಯ ಪಾಠ

**ಚಟುವಟಿಕೆ** ನವರಾಜ್ಯೋದಯ ದಿನಾಚರಣೆ
**ವರ್ಗ** ೬ ನೆಯ ಇಯತ್ತೆ
**ವಿಷಯ** ಭಾಷ (ಪದ್ಯ)
**ಸಮಯಾನ್ವಿತ ವಿಷಯ** ಪಠ್ಯೇತರ ಪದ್ಯ

| ಮೆಟ್ಟಲುಗಳು. | ಆವಶ್ಯಕ ಜ್ಞಾನ | ಕಲಿಸುವ ಕ್ರಮ | ಕ ಹ ಬರಹ |
|---|---|---|---|
| ೧) ಪ್ರಸ್ತಾವನೆ. | | ೧) ಇಂದಿನ ದಿನವು ನಮಗ ಶುಭ ದಿನವು ಏಕೆ ?<br>೨) ಇಂದು ಸಮಾರಂಭಲ್ಲಿ ಏನೇನು ಮಾಡಿದಿರಿ ?<br>೩) ಆ ಕವಿತೆಯಲ್ಲಿ ಏನೇನು ಹೇಳಿದ ? | |
| ೨) ಉದ್ದೇಶ-ಕಥನ | ಹಾಗಾದರೆ ಇಂದು ಸಭೆ: ಅಭ್ಯಸಿಸೋಣ | ಲ್ಲಿ ನೀವು ಅಂದ ಕವಿತೆಯನ್ನು ಈಗ | ಶುಭ ನುಡಿಯೆ ಶಕುನವಕ್ಕ ! |
| ೩) ವಿಷಯ ವಿವೇಚನೆ<br>ಅ) ಶಿಕ್ಷಕರ ಮಾದರಿಯ ಹಾಡು | ಇಂದಿನಿ ಶುಭದಿನದಿ ಶುಭ ನುಡಿಯೆ ಶುಭ<br>ನುಡಿಯೆ ಶುಭ ನುಡಿಯೆ ಶಕುನವಕ್ಕ,<br>ಒಂದೆ ಕುಲ ಒಬ್ಬಳೆ ತಾಯ್ ಕನ್ನಡ<br>ವೊಂದೆಂಗುಶುಭ ನುಡಿಯೆ ಶಕುನವಕ್ಕ ! * | ಶಿಕ್ಷಕರು ಮೊದಲು ಒಂದು ಸಲ ಸರಾಗವಾಗಿ ಅಂದು ತೋರಿಸುವದು | |

| | | | |
|---|---|---|---|
| ಬ) ೩ ಹಾವ ಭಾವದಿಂದ ಹಾಡುವದು | ೧) ಕೆಲವು ಜನರು ಹೊರಗೆ ಉಳಿದರು ಕೆಲವು ಜನ ಆಗ ದೆಂದರು ಕೊನೆಗೆ ಮೈಸೂರು ಉಳಿದ ಕರ್ನಾಟಕ ಸೇರಿತು<br>೨) ಕಸ್ತೂರಿ ಮಲ್ಲಿಗೆಗಳಲ್ಲಿರುವ ಸುಗಂಧ ಎಂಬುದು ಒಂದೇ ನಮ್ಮೆಲ್ಲರಲ್ಲಿಯೂ ಹರಿದ ರಕ್ತವು ಒಂದೇ ಆಗಿದೆ | ಶಿಕ್ಷಕರು ಕವನದ ಪ್ರತಿಗಳನ್ನು ವಿದ್ಯಾರ್ಥಿಗಳಿಗೆ ಹಂಚಿ, ಮತ್ತೊಮ್ಮೆ ಹಾವ ಭಾವದಿಂದ ಅಂದು ತೋರಿಸುವದು ಆ ಮೇಲೆ ಕೇಂದ್ರ ಪ್ರಶ್ನೆಗಳ ಕ. ಹ ವನ್ನು ವಿದ್ಯಾರ್ಥಿಗಳ ಎದುರಿಗೆ ಇಡುವದು ಆ ಪ್ರಶ್ನೆಗಳನ್ನು ಓದಿ ಉತ್ತರ ಹುಡುಕಲಿಕ್ಕೆ ಹೇಳಬೇಕು | ಕೇಂದ್ರ ಪ್ರಶ್ನೆಗಳು<br>೧) ಕನ್ನಡ ಪ್ರಾಂತ ರಚನೆ ಯಾಗುವಾಗ ಏನೇನು ನಡೆಯಿತು?<br>೨) ಮೈಸೂರು ಕನ್ನಡ ಎರಡು ಒಂದೇ ಹೇಗೆ ?<br>ಕಠಿಣ ಶಬ್ದಾರ್ಥ |
| | ೧) ಒಂದು ತಾಯಿಯ ಮಕ್ಕಳು ಒಂದಾಗಿ ಬಾಳುವ ಆನಂದವನ್ನು ನೋಡಿ ಅದರ ದನಿ ಸಂತೋಷ ದಿಂದ ಉಕ್ಕಿ ಬಂತು | ೧) ಶಕುನವಕ್ಕಿಯ ದನಿ ಉಕ್ಕಿ ಬರಲಿಕ್ಕೆ ಕಾರಣವೇನು ? | ವರ, ಮಡುಮಗ ,<br>ಅವನುಡಿ, ಕಟ್ಟಿವಾತು. |
| | ೨) ಅಣ್ಣ–ತಮ್ಮಂದಿರೆಲ್ಲ ಸೇರಿ, ದೀಪಧೂಪವನ್ನು ಎತ್ತಿ ಕರ್ನಾಟಕದ ಹೊರಗೆ ಉಳಿದ ಬಂಧುಗಳನ್ನು ಕರೆಯುತ್ತ ಕನ್ನಡಮ್ಮನ ಪೂಜೆ ಮಾಡುವೆವು | ೨) ನಾವು ಮಹಾದೇವಿಯ ಪೂಜೆಯನ್ನು ಹೇಗೆ ಮಾಡುತ್ತಿದ್ದೇವೆ? | ಅರ್ಥ ವಿವರಣೆ<br>೧) ಹೊರಗುಳಿದ ಬಳಗ<br>೨) ಹೆಸರಿಡುವ ಹಿಂದಿನಿಂದೆ<br>೩) ಹೋಳಿಗೆಯ ಜನ |

| | | |
|---|---|---|
| | ೩) ಕರ್ನಾಟಕ ಏಕೀಕರಣವಾಗುವ ಪೂರ್ವದಲ್ಲಿ ಮೈಸೂರಿಗೂ ಉಳಿದ ಕರ್ನಾಟಕಕ್ಕೂ ಹೊಂದದೆಂದು ಹೇಳುವವರ ನುಡಿಗಳು | ೩) ಹೋಳಿಗೆಯ ಜನರ ನುಡಿಗಳೆಂದರೆ ಏನು ? |
| | ೪) ಮದುವೆಯಲ್ಲಿ ಊಟಕ್ಕೆಂದು ಬಂದವರಿಗೆ ಮದುವೆಯ ಹೊಣೆಗಾರಿಕೆ ಇರುವದಿಲ್ಲ ಅವರ ಮಾತಿಗೆ ಬೆಲೆಯನ್ನು ಯಾರೂ ಕೊಡುವದಿಲ್ಲ ಅವರು ಊಟಕ್ಕೆ ಮಾತ್ರ ಬಂದಂಥವರು | ೪) ಇವರಿಗೆ ಹೋಳಿಗೆಯ ಜನರಿಂದುದು ಹೇಗೆ ಸಮರ್ಪಕವಾಗಿದೆ ? |
| | ೫) ಮಗುವು ಹುಟ್ಟಿದ ಮೇಲೆ ಹೆಸರಿಡುವಂತೆ ಕರ್ನಾಟಕ ಪ್ರಾಂತ ನಿರ್ಮಾಣವಾದ ಮೇಲೆ ಹೆಸರಿಡೋಣ ಎಂದು ಕವಿ ಹೇಳುವನು | ೫) ಪ್ರಾಂತಕ್ಕೆ ಹೆಸರಿಡುವದು ಯಾವಾಗ ಎಂದು ಕವಿ ಹೇಳುವನು ? |
| ೪) ಪುನರವಲೋಕನ. | | ಕವಿತೆಯ ಭಾವವು ಸುಸಂಗತವಾಗಿ ಹೊರಡುವಂತೆ ನಾಲ್ಕೈದು ಪ್ರಶ್ನೆಗಳನ್ನು ಕೇಳಬೇಕು. |
| ೫) ಗೃಹಪಾಠ | ಈ ಕವಿತೆಯ ಭಾವವನ್ನು ಮನಯಲ್ಲಿ ಬರೆದು ತನ್ನಿರಿ | |

* ಪೂರ್ಣ ಪದ್ಯವನ್ನು ಕೊನೆಗೆ ಕೊಟ್ಟಿದೆ ;

# ಶುಭ ನುಡಿಯು ಶಕುನವಕ್ಕಿ !

೧

ಇಂದಿನೀ ಶುಭ ದಿನದಿ ಶುಭ ನುಡಿಯೆ ಶುಭ ನುಡಿಯೆ
ಶುಭ ನುಡಿಯೆ ಶಕುನವಕ್ಕಿ
ಒಂದೆ ತಾಯ್ ಮಕ್ಕಳೊಂದಾಗಿ ಬಾಳುತಿರೆ ಬರಲಿ
ನಿನ್ನ ಸವಿದನಿಯೆ ಉಕ್ಕಿ !

೨

ಬಂಧು-ಬಾಂಧವರೆಲ್ಲ ಅಣ್ಣ-ತಮ್ಮಂದಿರೆಲ್ಲ
ಮಹಾದೇವಿಯಡಿನೇರಿ
ನಿಂದಿಹೆವು ದೀವ-ಧೂವವನೆತ್ತಿ, ಹೊರಗುಳಿದ
ಬಳಗವನು ಕರೆಯುತೊದರಿ !

೩

ಮದುವೆಯಾ ಮಂಟಪದಿ ಮುಹೂರ್ತಕೆ ಮೊದಲು
ನೇರ್ವಜನವರ ಹೊಂದದೆಂದೆ
ಮುದದ ಮೋಜಿನೊಳೇನಾದ ರೊಂದಪನುಡಿಯೆ
ಮಾಡುವರೆ ಅದನೆ ಮುಂದ !

೪

ನಿಲ್ಲುವುದೆ ಮದುವೆ ? ನೆನೆವರೆ ನೆಂಟರಿಷ್ಟರಾ
ಹೋಳಿಗೆಯ ಜನದ ನುಡಿಯ ?
ಬಲ್ಲವರು ವಧುವರರು ಬಂದಾಗದಿರಬಹುದೆ ?
ಪಡೆಯರೆ ಮಕ್ಕಳು-ಮರಿಯ ?

೫

ಕನ್ನಡದ ಕಸ್ತೂರಿ ಮೈಸೂರ ಮಲ್ಲಿಗೆಯೊ-
ಡಗಿರುವ ಗಂಧವೊಂದೆ

ಮುನ್ನವಾವುದೊ ಇರಲಿ, ಮಗು ಜನಿಸಿದಾ ಮೇಲೆ
ಹೆಸರಿಡುವ ಹಿಂದಿನಿಂದೆ !

೬

ಅಂತೆ ಒಂದಾಗಿ ನಿಂದಿರುವ ನಮ್ಮೆಲ್ಲರಲಿ
ಹರಿವ ರಕ್ತವದು ಒಂದೆ !
ಚಿಂತೆಯೇಕಿನ್ನು ಬನ್ನಿರೋ ಸೋದರರಿ
ಕನ್ನಡ ಕುಲವೆಂದಿಗೊಂದೆ !

೭

ಇಂದಿನೀ ಶುಭ ದಿನದಿ ಶುಭ ನುಡಿಯೆ ಶುಭ ನುಡಿಯೆ
ಶುಭ ನುಡಿಯೆ ಶಕುನವಕ್ಕಿ !
ಒಂದೆ ಕುಲ ಒಬ್ಬಳೆ ತಾಯ್ ಕನ್ನಡವೊಂದಂದು
ಶುಭನುಡಿಯೆ ಶಕುನವಕ್ಕಿ !

[ 'ವಿಜಯದುಂದುಭಿ' ಯಿಂದ ] — ಮಿರ್ಜಿ ಅಣ್ಣಾರಾಯ

# ಸಾಮಾನ್ಯ ಪಾಠಗಳು

## ೧ ನೆಯ ಪಾಠ

ವಿಷಯ ಕನ್ನಡ　　　　　ವರ್ಗ ೧ ನೆಯ ಇಯತ್ತೆ

ಪಾಠದ ಉದ್ದೇಶ : ವಾಕ್ಯಗಳ ವಾಚನದ ಮುಖಾಂತರ ಪದಗಳ ಪರಿಚಯ ಮಾಡಿಕೊಡುವದು

ಸಾಧನ ಆಕಳು, ಮನೆ, ಅಂಗಳ, ಕರು, ತಾಯಿ, ಮಗ ಇವರು ಇರುವ ಚಿತ್ರ

| ಮೆಟ್ಟಲುಗಳು | ಆವಶ್ಯಕ ಜ್ಞಾನ. | ಕಲಿಸುವ ಕ್ರಮ | ಕ ಹ ಬರೆಹ |
|---|---|---|---|
| ೧) ಪ್ರಸ್ತಾವನೆ. | | ಚಿತ್ರವನ್ನು ಮಕ್ಕಳ ಎದುರಿಗೆ ತೂಗ ಹಾಕಿ, ಈ ಚಿತ್ರದಲ್ಲಿ ಏನೇನು ಕಾಣುವಿರಿ ?<br>ಮತ್ತೇನಿದೆ ?<br>ಎಂದು ಪ್ರಶ್ನೆಗಳನ್ನು ಕೇಳಿ ಚಿತ್ರದೊಳಗಿನ ಹೆಸರುಗಳ ಪರಿಚಯ ಮಾಡಿಕೊಳ್ಳುವದು | |
| ೨) ಉದ್ದೇಶ ಕಥನ. | ನೀವು ಹೇಳಿದ ಹೆಸರುಗಳಿಂದ ಪೂರ್ಣ ಮಾತುಗಳನ್ನು ಮಾಡೋಣ. | | |
| ೩) ವಿಷಯ ವಿವೇಚನೆ | ಆಕಳು | ಮಕ್ಕಳು ಹೇಳಿದ ಪದಗಳನ್ನು ಕ ಹ. ಮೇಲೆ ಬರೆಯುವದು. | |

| | | | |
|---|---|---|---|
| | ಕರ<br>ತಾಯಿ<br>ಮಗ<br>ಮನೆ<br>ಅಂಗಳ | ಆಕಳು ಏನು ಮಾಡುತ್ತಿದೆ ?<br>ಕರವು ಏನು ಮಾಡುವದು ?<br>ತಾಯಿಯು ಏನು ಮಾಡುವಳು?<br>ಮಗನು ಏನು ಮಾಡುತ್ತಾನೆ ?<br>ಆಕಳು ಎಲ್ಲಿದೆ ?<br>ಅಂಗಳ ಎಲ್ಲಿದೆ ? | ಆಕಳು ನಿಂತಿದೆ<br>ಕರವು ಕುಳಿತಿದೆ<br>ತಾಯಿಯು ನಿಂತಿರುವಳು.<br>ಮಗನು ಕುಳಿತಿರುವನು<br>ಆಕಳು ಅಂಗಳದೊಳಗೆ ಇದೆ.<br>ಮನೆಯ ಮುಂದೆ ಇದೆ. |
| ೪) ವಾಕ್ಯಗಳ ಓದು | | ಕ ಹ ಮೇಲೆ ಬರೆದ ವಾಕ್ಯಗಳನ್ನು ನಾಲ್ಕೈದು ಹುಡುಗರಿಗೆ ಓದಲಿಕ್ಕೆ ಹೇಳುವದು. | |
| ೫) ಪುನರವಲೋಕನ | | ಪ್ರಶ್ನೆಗಳನ್ನು ಕ್ರಮವ್ಯತ್ಯಾಸ ಮಾಡಿ ಕೇಳಿ, ಕ ಹ ನೋಡಿ ಉತ್ತರ ವಾಕ್ಯಗಳನ್ನು ಕಂಡು ಹೇಳಲಿಕ್ಕೆ ಬರುವಂತೆ ವಿಚಾರಿಸುವದು<br>ಕ ಹ. ಮೇಲೆ ಅಪೂರ್ಣ ವಾಕ್ಯ ಕೊಟ್ಟು ಪೂರ್ಣ ವಾಕ್ಯ ಹೇಳಿಸಿಕೊಳ್ಳುವುದು | ಆಕಳು........ . . .<br>. ..... ಕುಳಿತಿದೆ<br>ಆಕಳು . ಇದೆ<br>ಅಂಗಳ ಮುಂದೆ .<br>ನಿಂತಿರುವಳು.<br>ಮಗನು. . . |
| ೬) ಉಪಸಂಹಾರ | ಕ ಹ ಮೇಲಿನ ಎರಡು ವಾಕ್ಯಗಳನ್ನು ನೋಡಿ ಬರೆಯಿರಿ. | | |

## ೨ ನೆಯ ವಾರ

**ವಿಷಯ** ಕನ್ನಡ ( ಗದ್ಯ )  **ವರ್ಗ** ೭ನೆಯ ಇಯತ್ತೆ

**ಪಾಠದ ಉದ್ದೇಶ** ' ಜೀವನ ಕಲೆ 'ಯನ್ನು ತಿಳಿದುಕೊಂಡು, ಆನಂದ ಪಡುವುದು.

| ಮೆಟ್ಟಲುಗಳು | ಆವಶ್ಯಕ ಜ್ಞಾನ | ಕಲಿಸುವ ಕ್ರಮ | ಕ ಹ. ಬರೆಹ |
|---|---|---|---|
| ೧) ಪ್ರಸ್ತಾವನೆ | ಚಿತ್ರಕಲೆ<br>ಸಂಗೀತ ಕಲೆ<br>ನೃತ್ಯ ಕಲೆ<br>ಶಿಲ್ಪಕಲೆ<br><br>ತುಂಬು ಬಾಳನ್ನು ಬಾಳುವುದೇ ಜೀವನ ಕಲೆ<br><br>ಸಮಾಧಾನ,<br>ಆನಂದವೃತ್ತಿ, ಸುಖ ದುಃಖ ಗಳಲ್ಲಿ ಸಮಭಾವ, ಹೃದಯ ವಂತಿಕೆಗಳಿಂದ ಸಾಧಿಸ ಬಹುದಾಗಿದೆ<br><br>ಶಾಂತಿ ಸುಖಗಳು ದೊರೆಯುತ್ತವೆ. | ಯಾವ ಯಾವ ಕಲೆಗಳ ಹೆಸರು ನಿಮಗೆ ಗೊತ್ತಿವೆ ?<br><br>ನಾವು ಬದುಕುವದು ಒಂದು ಕಲೆ ಅದು ಜೀವನ ಕಲೆ.<br><br>ಜೀವನ ಕಲೆ ಎಂದರೇನು ಹೇಳ ಬಲ್ಲಿರಾ ?<br><br>ಅದನ್ನು ಹೇಗೆ ಸಾಧಿಸಬೇಕು?<br>ಯಾಕೆ ಸಾಧಿಸಬೇಕು ?<br>ಅದರಿಂದ ಏನಾಗುವದು ? | |

| | | | |
|---|---|---|---|
| ೧) ಉದ್ದೇಶ ಕಥನ | ಈ ಜೀವನ ಕಲೆಯನ್ನು ಒಂದು ಸಣ್ಣ ಕಥೆಯ ಮೂಲಕ ಶ್ರೀ ಬಸವರಾಜ ಕಟ್ಟೀಮನಿಯವರು ಚಿತ್ರಿಸಿದ್ದಾರೆ. ಅದನ್ನು ಅರಿತು ಕೊಳ್ಳೋಣ. | | ಜೀವನ ಕಲೆ |
| ೨) ವಿಷಯ ವಿವೇಚನೆ<br>ಅ) ಶಿಕ್ಷಕರ ವಾಚನ<br>ಬ) ಮೌನ ವಾಚನ | ಆ ನಗರವೆಲ್ಲ "ಎರಡು ದಿನ ಹೊಟ್ಟೆಗಿಲ್ಲ ತಂದೆ" ಇತ್ಯಾದಿ ವಾರ ‡ | ಶಿಕ್ಷಕರು ಕಥೆಯನ್ನು ಭಾವಪೂರ್ಣವಾಗಿ ಓದುವದು ಆ ಮೇಲೆ ಕೇಂದ್ರ ಪ್ರಶ್ನೆಗಳನ್ನೂ ಕಠಿಣ ಪದಗಳ ಅರ್ಥವನ್ನೂ ಬರೆದ ಪಟವನ್ನೂ ವಿದ್ಯಾರ್ಥಿಗಳ ಎದುರಿಗೆ ಇಟ್ಟು ಮೌನ ವಾಚನಕ್ಕೆ ಅವಕಾಶ ಕಲ್ಪಿಸುವದು | ಪುನರುಜ್ಜೀವನ, ತಿರುಗಿ ಒದುಕುವದು.<br>ವೃತಾವಸ್ಥೆ, ಸಾಯುವ ಸ್ಥಿತಿ ಕೋಡಿಯಾಗಿ, ಒಂದೇಸವನೆ |
| | ಕಲೆಗಳ ಉನ್ನತಿಗಾಗಿ ಯತ್ನಿಸುವ ಮಾಸಿಕವೊಂದು ರಾಯರ ಜೀವನ ಚಿತ್ರವನ್ನು ಪ್ರಕಟಿಸಿ, 'ಕಲಾರಸಿಕ ಶಿಖಾಮಣಿ' ಎಂಬ ಬಿರುದನ್ನು ಕೊಟ್ಟಿತ್ತು.<br>ಅವರು ಧನವಂತರು ಆ ಊರಲ್ಲಿಯ ಕಲಾಪ್ರಿಯರೂ ಆಗಿದ್ದರು | ತರುವಾಯ ವಿವೇಚನೆಯನ್ನು ಮುಂದರಿಸುವದು<br>೧) ರಾಯರಿಗೆ 'ಕಲಾರಸಿಕ ಶಿಖಾಮಣಿ' ಎಂಬ ಬಿರುದು ಹೇಗೆ ಬಂತು ?<br>೨) ಕಲಾಪ್ರದರ್ಶನದ ಉದ್ಘಾಟನಕ್ಕೆ ರಾಯರನ್ನೇ ಏಕೆ ಕರೆದರು?<br>ಇದೇರೀತಿ ವಿವಿಧ ಪ್ರಶ್ನೆಗಳನ್ನು ಕೇಳಿ, ಕಥೆಯ ವಿವರ ಹಾಗೂ ಅದರ ರಹಸ್ಯವನ್ನು ವಿದ್ಯಾರ್ಥಿಗಳಿಂದ ಹೊರಡಿಸುವುದು | |

| | | | |
|---|---|---|---|
| ೪) ಪುನರವ-ಲೋಕನ. | | ನಾಲ್ಕಾರು ಪ್ರಶ್ನೆಗಳನ್ನು ಹಾಕಿ ಸಾರಾಂಶವನ್ನು ಕೇಳಿಕೊಳ್ಳುವದು | |
| ೫) ಗೃಹಪಾಠ | ರಾಯರ ಸ್ವಭಾವವನ್ನು ಚಿತ್ರಿಸಿ ಒಂದು ಚಿಕ್ಕ ಬರಹ ಬರೆದು ತರಲಿಕ್ಕೆ ಹೇಳುವದು | | |

‡ ವಿಜಯ ವಾಚನ ೭ ನೆಯ ಪುಸ್ತಕ

# ೩ ನೆಯ ಪಾಠ

**ವಿಷಯ : ಕನ್ನಡ ( ಪದ್ಯ )        ವರ್ಗ   ೧೧ನೆಯ ಇಯತ್ತೆ**

**ಪಾಠದ ಉದ್ದೇಶ   ಭಾವಗೀತೆಯನ್ನು ಭಾವಿಸಿ, ಆನಂದವನ್ನು ಅನುಭವಿಸುವದು**

| ಮೆಟ್ಟಲುಗಳು. | ಆವಶ್ಯಕ ಜ್ಞಾನ | ಕಲಿಸುವ ಕ್ರಮ | ಕ. ಹ ಬರಹ |
|---|---|---|---|
| ೧) ಪ್ರಸ್ತಾವನೆ. | ಜೋಗ<br>ಸಹ್ಯಾದ್ರಿಯಲ್ಲಿ.<br>ಶರಾವತೀ ನದಿ | ೧) ಕರ್ನಾಟಕದಲ್ಲಿ ದೊಡ್ಡ ಜಲಪಾತವು ಯಾವದು ?<br>೨) ಅದು ಯಾವ ಪರ್ವತದಲ್ಲಿದೆ ?<br>೩) ಯಾವ ನದಿಯಿಂದ ಆಗಿದೆ? | |
| ೨) ಉದ್ದೇಶ ಕಥನ | ಈ ತಡಸಲವನ್ನು ಮೊದಲ ಸಲ ಕಂಡಾಗ ಕವಿಯು ಅನುಭವಿಸಿದ ಅನುಭವವನ್ನು ' ಜೋಗದರ್ಶನ ' ಎಂಬ ಕವನದಲ್ಲಿ ಚಿತ್ರಿಸಿದ್ದಾನೆ ಅದನ್ನೋದಿ ನಾವೂ ಅನುಭವಿಸೋಣ. | | ಜೋಗದರ್ಶನ |

| | | | |
|---|---|---|---|
| ೩) ವಿಷಯ ವಿವೇಚನೆ | ಅದು ನೋಡು ಜೋಗ .§ | | ಕೇಂದ್ರ ಪ್ರಶ್ನೆಗಳು :<br>೧) ನೀರು ಹೇಗೆ ಇಳಿಯುತಿದೆ?<br>೨) ನೊರೆಯು ಹೇಗೆ ಇದೆ ?<br>೩) ಪೂರ್ಣತೆಯು ಯಾವುದರಲ್ಲಿ ಇರುತ್ತದೆ ? |
| ೪) ಶಿಕ್ಷಕರ ಕಾವ್ಯಗಾನ | | ಭಾವಪೂರ್ಣವಾಗಿ ಶಿಕ್ಷಕರು ಈ ಗೀತೆಯನ್ನು ಸರಾಗವಾಗಿ ಅನ್ನುವದು | |
| ೫) ಶಿ ಭಾವ ಪೂರ್ಣವಾಗಿ ಹಾಡುವದು | ,, | ಕೇಂದ್ರ ಪ್ರಶ್ನೆಗಳನ್ನು ಎದುರಿಗೆ ಇಟ್ಟು, ಕಠಿಣ ಪದಗಳ ಅರ್ಥವನ್ನೂ ಬರೆದು ಇಟ್ಟು ಇನ್ನೊಮ್ಮೆ ಹಾಡುವದು | ಕಠಿಣ ಪದಗಳ ಅರ್ಥ<br>ಹೊನಲು, ಪ್ರವಾಹ<br>ರಜತಗಿರಿ, ಬೆಳ್ಳಿಯ ಬೆಟ್ಟ<br>ಅವಿರತ, ಒಂದೇ ಸವನ<br>ಅವಿಚಲ, ನಿಶ್ಚಲ<br>ಪರಿಸರ, ಆವರಣ |
| | ಮೌನ ವಾಚನ | ವಿದ್ಯಾರ್ಥಿಗಳಿಗೆ ಮೌನವಾಗಿ ಓದಿಕೊಳ್ಳಲಿಕ್ಕೆ ಹೇಳುವದು | |
| | ೧) ಹಾಲಿನ ಪ್ರವಾಹದಂತೆ, ಶಿವನ ಜಡೆಯಂತೆ ಹಾಗೂ ವಿಷ್ಣುವಿನ ದಯೆಯ ಹಾಗೆ ನೀರು ಇಳಿಯುತ್ತಿದೆ<br>೨) ಬಿಳಿಯ ಕಲ್ಲಿನಂತೆ, ಬೆಳ್ಳಿಯ ಬೆಟ್ಟದಂತೆ ಮತ್ತು ಮುನಿಯ ಮನಸ್ಸಿನಂತೆ ಇದೆ<br>೩) ಕೆಳಗಿನ ಕರೆಯು ಮೇಲಿನ ಕೃಪೆಯನ್ನು ಪಡೆಯುವದರಲ್ಲಿದೆ | ಕೇಂದ್ರ ಪ್ರಶ್ನೆಗಳಿಗೆ ಉತ್ತರ ಕೇಳಿಕೊಳ್ಳುವದು | |

| | |
|---|---|
| ೪) ಒಂದು ಯೋಗ ವೆಂದಿದ್ದಾನೆ. | ೪) ಕವಿಯು ಜೋಗವನ್ನು ಏನೆಂದು ಕರೆದಿರುವನು ? |
| ೫) ಪರ್ವತದ ತುದಿಯಿಂದ ಇಳಿಯುತ್ತಿದೆ | ೫) ನೀರು ಎಲ್ಲಿಂದ ಇಳಿಯುತ್ತಿದೆ ? |
| ೬) ಓಗೊಡುತ | ೬) ನೀರಿನ ಸಪ್ಪಳವನ್ನು ಇಲ್ಲಿ ಯಾವ ಪದದಿಂದ ವ್ಯಕ್ತಪಡಿಸಲಾಗಿದೆ ? |
| ೭) ಕೊಳ್ಳದೊಳಗಿನ ಕೆಳಗಿನ ಬಿಳಿದಾದ ನೊರೆಯು ಕರೆಯುತ್ತಿದೆ | ೭) ಈ ಓಗೊಡುವಿಕೆಗೆ ಕಲೆಯು ಎಲ್ಲಿದೆ ? |
| ೮) ನಿಶ್ಚಲವಾದದ್ದೂ ಸತತವಾಗಿಯೂ ಇದೆ | ೮) ಆ ಕರೆಯು ಎಂಥದು ? |
| ೯) ಬಿಳಿಯ ಬಂಡೆ, ಬೆಳ್ಳಿಯ ಬೆಟ್ಟ, ಮುನಿಯ ಮನಸ್ಸು | ೯) ನಿಶ್ಚಲ ಎನ್ನುವದನ್ನು ಯಾವ ಉದಾಹರಣೆಗಳಿಂದ ಸ್ಪಷ್ಟಗೊಳಿಸಲಾಗಿದೆ ? |
| ೧೦) ಕೆಳಗಿನ ಮಂಜಿನೊಳಗಿಂದ ಹುಟ್ಟುತ್ತಿದೆ | ೧೦) ಆ ಕರೆಯು ಎಲ್ಲಿಂದ ಹುಟ್ಟುತ್ತಿದೆ ? |
| ೧೧) ಮಾನವನ ಅಜ್ಞಾನವನ್ನು ಸೂಚಿಸುವದು. | ೧೧) ಮಂಜು ಏನನ್ನು ಸೂಚಿಸುತ್ತದೆ ? |

| | |
|---|---|
| ೧೨) ನಿರ್ಮಲ ಮನಸ್ಸಿನಿಂದ ಪ್ರಾರ್ಥಿಸಬೇಕು. | ೧೨) ಅಜ್ಞಾನಿಯಾದ ಮಾನವನು ದೈವೀಕೃಪೆಯನ್ನು ಹೊಂದುವದಕ್ಕೆ ಏನು ಮಾಡಬೇಕು ? |
| ೧೩) ಮಾನವನ ಕರೆಯು ದೈವೀಕೃಪೆಯನ್ನು ಪಡೆದಾಗ ಈ ಯೋಗವು ಪೂರ್ಣಗೊಳ್ಳುತ್ತದೆ | ೧೩) ಈ ಪ್ರಾರ್ಥನೆಯ ಯೋಗವು ಯಾವಾಗ ಪೂರ್ಣಗೊಳ್ಳುವದು ? |
| ೧೪) ಅಜ್ಞಾನವೆಂಬ ಮಂಜು ನಾಶವಾಗಬೇಕು | ೧೪) ಆಗ ಏನು ಅಳಿಯಬೇಕು? |
| ೧೫) ಸಹ್ಯಾದ್ರಿ ಪರ್ವತ, ಸೌಂದರ್ಯದ ರಾಶಿ, ಪ್ರಕಾಶದ ಇರವು-ಇವೆಲ್ಲ ಸನ್ನಿವೇಶಗಳಾಗಿವೆ. | ೧೫) ಈ ಯೋಗಕ್ಕೆ ಸನ್ನಿವೇಶ ಎಂಥದು ? |
| ೧೬) ಸತ್ಯ, ಸೌಂದರ್ಯ, ಪ್ರಕಾಶಗಳು ಸಾಧಕನಿಗೆ ಅವಶ್ಯಕವಾಗಿವೆ | ೧೬) ಇವುಗಳಿಗೆ ಇಲ್ಲಿ ವಿಶೇಷ ಅರ್ಥವೇನಿದೆ ? |

| | | |
|---|---|---|
| ೪) ಪುನರವಲೋಕನ | | ಸಾರಾಂಶ ಪ್ರಶ್ನೆಗಳು :<br>೧) ಜೋಗವು ಒಂದು ದಿವ್ಯ ಯೋಗವು ಹೇಗೆ ?<br>೨) ಜೋಗವನ್ನು ಕಂಡಾಗ ಕವಿಯಲ್ಲಿ ಸ್ಫುರಿಸಿದ ದರ್ಶನ ಯಾವುದು ?<br>೩) ಈ ಕವಿತೆಗೆ 'ಜೋಗ ದರ್ಶನ' ಎಂಬ ಹೆಸರು ಹೇಗೆ ಉಚಿತವಾಗಿದೆ ? |
| ೫) ಗೃಹಪಾಠ | ಈ ಕವಿತಯ ಬಾವವನ್ನು ವಿವರ ಪೂರ್ವಕವಾಗಿ ಮನೆಯಲ್ಲಿ ಬರೆದು ತನ್ನಿರಿ. | |

§ಪಾಠದ ಕೊನೆಗೆ ಪೂರ್ಣ ಕವನವನ್ನು ಕೊಟ್ಟಿದೆ.

# ಜೋಗ ದರ್ಶನ

ಅದು ನೋಡು ಜೋಗ।
ದಿವ್ಯಯೋಗ ॥ ಪಲ್ಲ ॥

೧

ಗಿರಿಯ ತುದಿಯಿಂದ
ಹರಿವ ನದಿಯಿಂದ
ಸುರಿವ ಜಲದಿಂದ
ಓಗೊಡುತ,
ಹಾಲು ಹೊನಲಂತೆ
ಶಿವನ ಜಡೆಯಂತೆ
ಹರಿಯ ಕೃಪೆಯಂತೆ
ಇಳಿಯುತಿದೆ
ಅದು ನೋಡು ಜೋಗ। ದಿವ್ಯಯೋಗ ॥

೨

ಕೊಳ್ಳದಡಿಯಿಂದ
ಏಳ್ವ ಹನಿಯಿಂದ
ಮಂಜಿನೊಡಲಿಂದ
ಅವಿರತವು,
ಬಿಳಿಯ ಶಿಲೆಯಂತೆ
ರಜತ ಗಿರಿಯಂತೆ
ಮುನಿಯ ಮನದಂತೆ
ಅವಿಚಲವು,
ತಾನಾಗಿ ಇಂದು
ಮನದೆರೆದು ನಿಂದು
ಬಿಳಿ ನೊರೆಯು ಬಂದು
ಕರೆಯುತಿದೆ
ಅದು ನೋಡು ಜೋಗ। ದಿವ್ಯಯೋಗ ॥

೩

ನೀರು ಇಳಿವುದಕೆ
ಮಂಜು ಅಳಿವುದಕೆ
ನೊರೆಯು ಎಳೆವುದಕೆ
ಪರಿಸರವು,
ಸಹ್ಯಗಿರಿ ನಿಜವು
ಚಲುವಿನಾಗರವು
ಬೆಳಕಿನಾ ಇರವು
ಆಗಿಹುದು
ಅದು ನೋಡು ಜೋಗ। ದಿವ್ಯಯೋಗ ॥

೪

ಕೆಳಗಿನಾ ಕರೆಯು
ಮೇಲಿನಾ ಕೃಪೆಯ
ಪಡೆದು ಪೂರ್ಣತೆಯ
ಹೊಂದಿಹುದು
ಅದು ನೋಡು ಜೋಗ। ದಿವ್ಯ ಯೋಗ

ಅಪ್ರಕಟಿತ —ಮಿರ್ಜಿ ಅಣ್ಣಾರಾಯ.



